CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಮಾರ್ಚ್ ೧೦, ೨೦೦೫ (ಫಾಲ್ಗುಣ ೧೯, ಶಕ ವರ್ಷ ೧೯೨೬) | ಸಂಚಿಕೆ ೧೦ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**ಅಧಿಸೂಚನೆ ಸಂಖ್ಯೆ: ಆಕುಕ 154 ಎಂಎಂಸಿ 2003 ಬೆಂಗಳೂರು, ದಿನಾಂಕ: 8ನೇ ಫೆಬ್ರವರಿ 2005**

ಬೆಂಗಳೂರು ವೈದ್ಯಕೀಯ ಕಾಲೇಜಿನ ರೋಗನಿರೋಧಕ ಮತ್ತು ಸಾಮಾಜಿಕ ವೈದ್ಯಶಾಸ್ತ್ರ ಉಪನ್ಯಾಸಕ ಡಾ: ಟಿ. ಎಸ್. ರಂಗನಾಥ್‌ರವರಿಗೆ ಈ ತಕ್ಷಣದಿಂದ ಜಾರಿಗೆ ಬರುವಂತೆ ರೋಗ ನಿರೋಧಕ ಮತ್ತು ಸಾಮಾಜಿಕ ವೈದ್ಯಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಹುದ್ದೆಯಲ್ಲಿ ಸ್ಥಾನಪನ್ನರಾಗಲು ಬಡ್ತಿ ನೀಡಿ ಬೆಂಗಳೂರು ವೈದ್ಯಕೀಯ ಕಾಲೇಜಿನಲ್ಲಿ ಡಾ: ಡಿ. ಗೋಪಿನಾಥ್‌ರವರ ಸ್ವಇಚ್ಛಾ ನಿವೃತ್ತಿಯಿಂದ ತೆರವಾದ ರೋಗನಿರೋಧಕ ಮತ್ತು ಸಾಮಾಜಿಕ ವೈದ್ಯಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಹುದ್ದೆಯಲ್ಲಿ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಮೈಸೂರು ವೈದ್ಯಕೀಯ ಕಾಲೇಜಿನ ರೋಗನಿರೋಧಕ ಮತ್ತು ಸಾಮಾಜಿಕ ವೈದ್ಯಶಾಸ್ತ್ರ ಉಪನ್ಯಾಸಕ ಡಾ: ಮುದಸ್ಸರ್ ಅಜೀಬ್‌ರವರಿಗೆ ಈ ತಕ್ಷಣದಿಂದ ಜಾರಿಗೆ ಬರುವಂತೆ ರೋಗನಿರೋಧಕ ಮತ್ತು ಸಾಮಾಜಿಕ ವೈದ್ಯಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಹುದ್ದೆಯಲ್ಲಿ ಸ್ಥಾನಾಪನ್ನರಾಗಲು ಬಡ್ತಿ ನೀಡಿ ಮೈಸೂರು ವೈದ್ಯಕೀಯ ಕಾಲೇಜಿನಲ್ಲಿ ಡಾ: ಎಂ. ಪಿ. ಶಾರದರವರ ಬಡ್ತಿಯಿಂದ ತೆರವಾದ ರೋಗನಿರೋಧಕ ಮತ್ತು ಸಾಮಾಜಿಕ ವೈದ್ಯಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಹುದ್ದೆಯಲ್ಲಿ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ನಾಗರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ).

ಪಿ.ಆರ್.266

### ಸಹಕಾರ ಇಲಾಖೆ

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ತಿಪಟೂರು ಉಪವಿಭಾಗ, ತಿಪಟೂರು ಇವರ ಕಾರ್ಯಾಲಯದ ನಡವಳಿಕೆಗಳು**

**ಅಧಿಭಾರ ಅರ್ಜಿ ಸಂಖ್ಯೆ:3:2004-2005**

**ಅರ್ಜಿದಾರರು :**
ವ್ಯವಸ್ಥಾಪಕರು ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕ್ (ನಿ),
ತಂಡಗ, ತುರುವೇಕೆರೆ ತಾಲ್ಲೂಕು.

**ವಿರುದ್ಧ**

**ಎದುರು ಅರ್ಜಿದಾರರು:**
ಲೇಟ್ ನಂಜಪ್ಪ, ಮಾಜಿ ಕಾರ್ಯದರ್ಶಿ, ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕ್ (ನಿ), ತಂಡಗ, ತುರುವೇಕೆರೆ ತಾಲ್ಲೂಕು.

**ವಾರಸುದಾರರು :**

1. ಶ್ರೀಮತಿ ಲೀಲಾ ಕೋಂ ಲೇಟ್ ನಂಜಪ್ಪ, ಬಾವಿಕೇರಿ ಮಸೀದಿ ಹಿಂಭಾಗ ತುರುವೇಕೆರೆ ಟೌನ್ ತುರುವೇಕೆರೆ.
2. ಅರುಣ್‌ಕುಮಾರ್ ಬಿನ್ ಲೇಟ್ ನಂಜಪ್ಪ ಬಾವಿಕೇರಿ ಮಸೀದಿ ಹಿಂಭಾಗ, ತುರುವೇಕೆರೆ ಟೌನ್ ತುರುವೇಕೆರೆ.
3. ಅಶೋಕ್ ಬಿನ್ ಲೇಟ್ ನಂಜಪ್ಪ ಬಾವಿಕೇರಿ ಮಸೀದಿ ಹಿಂಭಾಗ, ತುರುವೇಕೆರೆ ಟೌನ್, ತುರುವೇಕೆರೆ.

**ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103ರ ಮೇರೆಗೆ ಹೊರಡಿಸಿದ ತೀರ್ಪು ಮುನ್ನ ಜಪ್ತಿ ಆಜ್ಞೆ:**

**ಪ್ರಸ್ತಾವನೆ:**

ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕ್ (ನಿ) ತಂಡಗ, ತುರುವೇಕೆರೆ ತಾಲ್ಲೂಕು ಈ ಬ್ಯಾಂಕ್‌ನಲ್ಲಿ ಶ್ರೀನಂಜಪ್ಪ (ಪವತಿ) ಇವರು ವ್ಯವಸ್ಥಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ನಗದು ಮತ್ತು ದಾಸ್ತಾನು ರೂಪದಲ್ಲಿ ರೂ. 232959-04 ಗಳನ್ನು ದುರುಪಯೋಗ ಪಡಿಸಿಕೊಂಡಿರುವುದು ಬ್ಯಾಂಕ್‌ನ 2002-2003ನೇ ಸಾಲಿನ ಲೆಕ್ಕ ಪರಿಶೋಧನಾ ವರದಿಯಲ್ಲಿ ಬೆಳಕಿಗೆ ಬಂದಿದ್ದು ಸದರಿಯವರು ದುರುಪಯೋಗ ಪಡಿಸಿಕೊಂಡಿರುವ ಹಣವನ್ನು ಬ್ಯಾಂಕ್‌ಗೆ ಮರು ಪಾವತಿಸುವ ಮುನ್ನ ಮರಣ ಹೊಂದಿದ ಪ್ರಯುಕ್ತ ಬ್ಯಾಂಕ್‌ನ ವ್ಯವಸ್ಥಾಪಕರು ದುರುಪಯೋಗ ಹಣದ ವಸೂಲಾತಿಗಾಗಿ ಶ್ರೀಲೇಟ್ ನಂಜಪ್ಪನವರ ವಾರಸುದಾರರಾದ ಹೆಂಡತಿಯಾದ ಶ್ರೀಮತಿ ಲೀಲಾ ಮತ್ತು ಮಕ್ಕಳಾದ ಅರುಣ್‌ಕುಮಾರ್ ಬಿನ್ ಲೇಟ್ ನಂಜಪ್ಪ ಮತ್ತು ಅಶೋಕ್ ಬಿನ್ ಲೇಟ್ ನಂಜಪ್ಪ ಇವರುಗಳನ್ನು ವಾರಸುದಾರರನ್ನಾಗಿ ಮಾಡಿ ಬ್ಯಾಂಕ್‌ನಲ್ಲಿ ದುರುಪಯೋಗವಾಗಿರುವ ಹಣದ ವಸೂಲಾತಿಗಾಗಿ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 69 ರ ಅಡಿಯಲ್ಲಿ ಅಧಿಭಾರ ಅರ್ಜಿಯನ್ನು ದಾಖಲು ಮಾಡಿದ್ದು ಪ್ರಕರಣದ ವಿಚಾರಣೆ ನಡೆಯುತ್ತಿರುತ್ತದೆ.

ದುರುಪಯೋಗದ ಮೊತ್ತಕ್ಕೆ ತಕ್ಕ ಮೌಲ್ಯದ ಎದುರು ಅರ್ಜಿದಾರರುಗಳ ಅವಿಭಾಜ್ಯ ಕುಟುಂಬ ಸ್ಥಿರಾಸ್ತಿಯನ್ನು ತೀರ್ಪು ಪೂರ್ವ ನ್ಯಾಯಾಲಯದ ವ್ಯಾಪ್ತಿಗೆ ಒಳಪಡಿಸುವಂತೆ ಬ್ಯಾಂಕ್‌ನ ವ್ಯವಸ್ಥಾಪಕರು ದಿನಾಂಕ: 10.1.2005 ರಂದು ಮನವಿ ಸಲ್ಲಿಸಿರುತ್ತಾರೆ. ಆದ್ದರಿಂದ ಬ್ಯಾಂಕ್‌ನ ಹಿತದೃಷ್ಟಿಯಿಂದ ಭದ್ರತೆಗಾಗಿ ಎದುರು ಅರ್ಜಿದಾರರುಗಳ ಅವಿಭಾಜ್ಯ ಕುಟುಂಬದ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಸ್ಥಿರಾಸ್ತಿಯನ್ನು ಪರಭಾರೆ ಮಾಡುವ ಅಥವಾ ಮಾರಾಟ ಮಾಡುವ ದಾನ ಮಾಡುವ ಅಥವಾ ಇನ್ನಾವುದೇ ರೀತಿ ವರ್ಗಾಯಿಸುವುದನ್ನು ತಡೆಗಟ್ಟಲು ಈ ಕೆಳಕಂಡ ಷರತ್ತಿನೊಂದಿಗೆ ತೀರ್ಪು ಪೂರ್ವ ಜಪ್ತಿಗೊಳಿಸಿ ಆದೇಶ ಹೊರಡಿಸಿದೆ.

**ಆದೇಶ**

**ನಂ: ಸನಿ-34: ಡಿಡಿಎಸ್:ಕಲಂ:103:91:2004-2005 ದಿನಾಂಕ: 31ನೇ ಜನವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ತಿಪಟೂರು ಉಪವಿಭಾಗ, ತಿಪಟೂರು ಆದ ನಾನು ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103 ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ: 21.11.2001 ರಂತೆ ದತ್ತವಾಗಿರುವ ಅಧಿಕಾರ ಉಪಯೋಗಿಸುತ್ತಾ ಈ ಕೆಳಗೆ ಕಾಣಿಸಿರುವ ಸ್ಥಿರಾಸ್ತಿಯನ್ನು ತೀರ್ಪು ಪೂರ್ವ ಷರತ್ತಿನೊಂದಿಗೆ ಜಪ್ತಿಗೊಳಿಸಲಾಗಿದೆ ಎಂದು ಆದೇಶಿಸಿರುತ್ತೇನೆ. ಅಲ್ಲದೆ ಎದುರು ಅರ್ಜಿದಾರರು ಷರತ್ತು ಪೂರ್ವಿಕ ಜಪ್ತಿ ಆಜ್ಞೆಯ ವ್ಯಾಪ್ತಿಯಿಂದ ವಿಮುಕ್ತರಾಗಲು ಇಚ್ಛಿಸಿದಲ್ಲಿ ಜಪ್ತಿಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ತಕ್ಕಷ್ಟು ಮತ್ತು ನ್ಯಾಯಾಲಯವು ಸರಿ ಎಂದು ಭಾವಿಸುವ ನಗದು ಭದ್ರತೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪ ವಿಭಾಗ ಇವರ ಹೆಸರಿನಲ್ಲಿ ತುಮಕೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ (ನಿ), ತುಮಕೂರು ತಿಪಟೂರು ಶಾಖೆಯಲ್ಲಿ ಅಮಾನತ್ತು ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ರಸೀತಿ ಅಥವಾ ಚಲನ್ ಪ್ರತಿಯನ್ನು ಈ ಆದೇಶದ ದಿನಾಂಕದಿಂದ ಮೂವತ್ತು ದಿವಸದೊಳಗೆ ಹಾಜರುಪಡಿಸುವುದರ ಮೂಲಕ ಜಪ್ತಿ ಆಜ್ಞೆಯಿಂದ ಹೊರಗುಳಿಯಬಹುದೆಂದು ಸಂಬಂಧಿಸಿದವರೆಗೆ ತಿಳುವಳಿಕೆ ನೀಡಲಾಗಿದೆ. ಭದ್ರತೆಯನ್ನು ಒದಗಿಸುವ ಷರತ್ತನ್ನು ಪೂರೈಸಲು ವಿಫಲವಾದರೆ ತೀರ್ಪು ಪೂರ್ವ ಷರತ್ತು ಸಹಿತ ಜಪ್ತಿ ಆಜ್ಞೆಯನ್ನು ದೃಢೀಕರಿಸಲಾಗುವುದೆಂದು ಮತ್ತು ಖಾಯಂಗೊಳಿಸಲಾಗುವುದು ಎಂದು ತಿಳಿಯುವುದು ಮತ್ತು ಈ ಕೆಳಗೆ ಕಾಣಿಸಿರುವ ಸ್ಥಿರಾಸ್ತಿಯನ್ನು ಪಡೆಯುವ ಅಥವಾ ಖರೀದಿಸುವ ದಾನ ಪಡೆಯುವ ಅಥವಾ ಇನ್ನಾವುದೇ ರೀತಿ ಹೊಂದುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ತೀರ್ಪು ಮುನ್ನ ಷರತ್ತು ಪೂರ್ವಿಕ ಜಪ್ತಿ ಆಜ್ಞೆಗೆ ಒಳಪಡುವುದು ಎಂದು ಸಹ ಆದೇಶಿಸಿದೆ.

**ಜಪ್ತಿ ಆದೇಶಕ್ಕೆ ಒಳಗಾದ ಸ್ಥಿರಾಸ್ತಿ ವಿವರ**

| ಕ್ರ. ಸಂ. | ಹಕ್ಕುದಾರರ ಹೆಸರು | ಸ್ಥಿರಾಸ್ತಿ ಇರುವ ಗ್ರಾಮ | ಹೋಬಳಿ ತಾಲ್ಲೂಕು | ಸರ್ವೆನಂ. | ವಿಸ್ತೀರ್ಣ | ತರಹೆ |
|---|---|---|---|---|---|---|
| 1. | ಶ್ರೀಮತಿ ಲೀಲಾ ಕೋಂ ಲೇಟ್ ನಂಜಪ್ಪ | ಮಲ್ಲಾಘಟ್ಟ ಅಮಾನಿಕೆರೆ | ತುರುವೇಕೆರೆ | 2 ಹಿಸ್ಸಾ 2 | 0.02-08 | ಭಾಗಾಯ್ತು |
| 2. | ಆರ್. ಲೀಲಾ ಕೋಂ ಲೇಟ್ ನಂಜಪ್ಪ | ಕೊಡಗೀಹಳ್ಳಿ | ತುರುವೇಕೆರೆ ತಾ. | 231 ಹಿಸ್ಸಾ 5 | 0.09 | ಖುಷ್ಕಿ |
| 3. | ಆರ್. ಲೀಲಾ ಕೋಂ ಲೇಟ್ ನಂಜಪ್ಪ | ತುರುವೇಕೆರೆ ಗ್ರಾಮಾಂತರ | ತುರುವೇಕೆರೆ ತಾಲ್ಲೂಕು | 204 ಹಿಸ್ಸಾ 3 | 1.03 | “ |
| 4. | ಆರ್. ಲೀಲಾ ಕೋಂ ಲೇಟ್ ನಂಜಪ್ಪ | ಟಿ. ಹೊಸಹಳ್ಳಿ | ತುರುವೇಕೆರೆ ತಾಲ್ಲೂಕು | 15 ಹಿಸ್ಸಾ 7 | 0.26.08 | “ |
| 5. | ಆರ್. ಲೀಲಾ ಕೋಂ ಲೇಟ್ ನಂಜಪ್ಪ | ತುರುವೇಕೆರೆ ಗ್ರಾಮಾಂತರ | ತುರುವೇಕೆರೆ ತಾಲ್ಲೂಕು | 256 ಹಿಸ್ಸಾ 25 | 0.05 | ಭಾಗಾಯ್ತು |
| 6. | “ | “ | “ | 256 ಹಿಸ್ಸಾ 10 | 0.07 | ಖುಷ್ಕಿ |
| 7. | “ | ಮಲ್ಲಾಘಟ್ಟ ಅಮಾನಿಕೆರೆ | ತುರುವೇಕೆರೆ ತಾಲ್ಲೂಕು | 2 ಹಿಸ್ಸಾ 9 | 0.03 | ಭಾಗಾಯ್ತು |

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 31.1.2005 ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತಿಪಟೂರು ಉಪವಿಭಾಗ, ತಿಪಟೂರು.

ಪಿ.ಆರ್.265

**ಶ್ರೀ ಎಸ್. ಮರಿಸ್ವಾಮಿ ಐಪಿಎಸ್ ಪೊಲೀಸ್ ಆಯುಕ್ತರು, ಬೆಂಗಳೂರು ನಗರ ರವರ ನಡವಳಿಗಳು**

**ವಿಷಯ :** ಹೊಸೂರು ರಸ್ತೆ, ಬನ್ನೇರುಘಟ್ಟ ರಸ್ತೆ ಹಾಗೂ ಸರ್ಜಾಪುರ ರಸ್ತೆಗಳಲ್ಲಿ ಬಾರಿ ಸರಕು ಸಾಗಣೆ ವಾಹನಗಳ ಸಂಚಾರ ನಿಷೇಧವನ್ನು ಖಾಯಂ ಆಗಿ ಜಾರಿಗೆ ತರುವ ಬಗ್ಗೆ.

**ಉಲ್ಲೇಖ :** ಈ ಕಛೇರಿಯ ಅಧಿಸೂಚನೆ ಸಂಖ್ಯೆ: 48/ಸಂವಿ/ಸಿಓಪಿ/2004 ದಿನಾಂಕ: 21.10.2004.

**ಪ್ರಸ್ತಾವನೆ:**

ದಿನಾಂಕ: 21.10.2004 ರಂದು ಬೆಂಗಳೂರು ನಗರ ಆಡುಗೋಡಿ ಸಂಚಾರ ಉಪ ವಿಭಾಗ ವ್ಯಾಪ್ತಿಗೆ ಬರುವ ಪ್ರಮುಖ ರಸ್ತೆಗಳಾದ ಹೊಸೂರು ರಸ್ತೆ, ಬನ್ನೇರುಘಟ್ಟ ರಸ್ತೆ ಮತ್ತು ಸರ್ಜಾಪುರ ರಸ್ತೆಗಳಲ್ಲಿ ಸುಗಮ ಸಂಚಾರದ ದೃಷ್ಟಿಯಿಂದ ಬೆಳಿಗ್ಗೆ 8.00 ಗಂಟೆಯಿಂದ 10.00 ಗಂಟೆವರೆಗೆ ಮತ್ತು ಸಂಜೆ 5.00 ಗಂಟೆಯಿಂದ ರಾತ್ರಿ 8.00 ಗಂಟೆವರೆಗೆ ಬಾರೀ ಸರಕು ಸಾಗಣೆ ವಾಹನಗಳ ಎರಡೂ ಕಡೆ ಸಂಚಾರವನ್ನು ಕೆಳಕಂಡಂತೆ ನಿರ್ಬಂಧಿಸಿ ದಿನಾಂಕ: 23.10.2004 ರಿಂದ ಪ್ರಾಯೋಗಿಕವಾಗಿ ಒಂದು ತಿಂಗಳ ಕಾಲ ಜಾರಿಯಲ್ಲಿರುವಂತೆ ಉಲ್ಲೇಖಿತ ಅಧಿಸೂಚನೆಯಲ್ಲಿ ಆದೇಶಿಸಲಾಗಿತ್ತು.

1. ಹೊಸೂರು ರಸ್ತೆ - ಸಿಲ್ಕ್ ಬೋರ್ಡ್ ಜಂಕ್ಷನ್‌ನಿಂದ ಚಂದಾಪುರದವರೆಗೆ
2. ಬನ್ನೇರುಘಟ್ಟ ರಸ್ತೆ - ಜೆ.ಡಿ. ಮರ ಜಂಕ್ಷನ್‌ನಿಂದ ಮೀನಾಕ್ಷಿ ದೇವಸ್ಥಾನವರೆಗೆ
3. ಸರ್ಜಾಪುರ ರಸ್ತೆ - ಇಬ್ಲೂರು ಜಂಕ್ಷನ್‌ನಿಂದ ಜೆ.ಡಿ. ಮರ ಜಂಕ್ಷನ್‌ವರೆಗೆ

ಮೇಲ್ಕಂಡ ರಸ್ತೆಗಳಲ್ಲಿ ಸುಗಮ ಸಂಚಾರಕ್ಕೋಸ್ಕರ ತಾತ್ಕಾಲಿಕವಾಗಿ ಬಾರೀ ಸರಕು ಸಾಗಣೆ ವಾಹನಗಳ ಎರಡೂ ಕಡೆ ಸಂಚಾರ ನಿರ್ಬಂಧವನ್ನು ಜಾರಿಗೆ ತಂದ ಬಳಿಕ ಸಂಚಾರವು ಸುಗಮವಾಗಿ ಸಾಗುತ್ತಿರುವುದು ಕಂಡುಬಂದಿದ್ದು, ಇದರ ಬಗ್ಗೆ ತಜ್ಞರ ಹಾಗೂ ವಿವಿಧ ಸಂಸ್ಥೆಗಳ ಅಭಿಪ್ರಾಯವನ್ನು ಪಡೆದು ವಾಹನ ಸಂಚಾರ ದಟ್ಟಣೆಯನ್ನು ಕಡಿಮೆಗೊಳಿಸಲು ಹಾಗೂ ಸುಗಮ ಸಂಚಾರಕ್ಕಾಗಿ, ಅಪಘಾತಗಳ ನಿಯಂತ್ರಣ ಸಲುವಾಗಿ ಹಾಗೂ ವಾಯು ಮಾಲಿನ್ಯವನ್ನು ತಡೆಗಟ್ಟುವ ಸಲುವಾಗಿ ಈ ಮೇಲ್ಕಂಡ ರಸ್ತೆಗಳಲ್ಲಿ ಬಾರೀ ಸರಕು ಸಾಗಣೆ ವಾಹನಗಳ ಎರಡೂ ಕಡೆ ಸಂಚಾರ ನಿರ್ಬಂಧವನ್ನು ದಿನಾಂಕ: 23.10.2004 ರಿಂದ ಒಂದು ತಿಂಗಳ ಕಾಲ ಪ್ರಾಯೋಗಿಕವಾಗಿ ಜಾರಿಯಲ್ಲಿ ಬರುವಂತೆ ಹೊರಡಿಸಿದ್ದ ಆದೇಶವನ್ನು ಖಾಯಂ ಆಗಿ ಮುಂದುವರಿಸುವುದು ಅವಶ್ಯಕವಾಗಿ ಕಂಡು ಬಂದ ಪ್ರಯುಕ್ತ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ: 48/ಸಂವಿ/ಸಿಓಪಿ/2004, ಪೊಲೀಸ್ ಆಯುಕ್ತರವರ ಕಛೇರಿ, ಬೆಂಗಳೂರು ನಗರ, ದಿನಾಂಕ: 2ನೇ ಫೆಬ್ರವರಿ 2005**

ಭಾರತೀಯ ಮೋಟಾರ್ ವಾಹನ ಕಾಯ್ದೆ 1988ರ ಕಲಂ 115 ಹಾಗೂ ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಕಾಯ್ದೆ 1960ರ ಕಲಂ 3ರ ಪ್ರಕಾರ ಎಸ್. ಮರಿಸ್ವಾಮಿ, ಐ.ಪಿ.ಎಸ್., ಪೊಲೀಸ್ ಕಮೀಷನರ್, ಬೆಂಗಳೂರು ನಗರ, ಬೆಂಗಳೂರು ಆದ ನಾನು ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹೊಸೂರು ರಸ್ತೆ, ಬನ್ನೇರುಘಟ್ಟ ರಸ್ತೆ ಮತ್ತು ಸರ್ಜಾಪುರ ರಸ್ತೆಗಳಲ್ಲಿ ಬೆಳಿಗ್ಗೆ 8.00 ಗಂಟೆಯಿಂದ 10.00 ಗಂಟೆವರೆಗೆ ಮತ್ತು ಸಂಜೆ 5.00 ಗಂಟೆಯಿಂದ ರಾತ್ರಿ 8.00 ಗಂಟೆವರೆಗೆ ಬಾರೀ ಸರಕು ಸಾಗಣೆ ವಾಹನಗಳ ಎರಡೂ ಕಡೆ ಸಂಚಾರವನ್ನು ನಿರ್ಬಂಧಿಸಿ ಪ್ರಾಯೋಗಿಕವಾಗಿ ಒಂದು ತಿಂಗಳ ಕಾಲ ಜಾರಿಗೆ ತರಲಾಗಿದ್ದ ಸಂಚಾರ ಮಾರ್ಪಾಡುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಖಾಯಂ ಆಗಿ ಮುಂದುವರಿಸಲು ಆದೇಶಿಸಲಾಗಿದೆ.

**ಹಾಗೂ**

ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

**ಎಸ್. ಮರಿಸ್ವಾಮಿ**

ಪಿ.ಆರ್.268 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಪೊಲೀಸ್ ಕಮೀಷನರ್ ರವರ ಕಛೇರಿ, ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ ಸಂಖ್ಯೆ: 2/ಸಂವಿ/ಸಿಓಪಿ/2005 ದಿನಾಂಕ: 15/20ನೇ ಜನವರಿ, 2005**

ಬೆಂಗಳೂರು ನಗರ ಅಶೋಕನಗರ ಸಂಚಾರ ವಲಯದ ವ್ಯಾಪ್ತಿಯಲ್ಲಿರುವ ರೆಸಿಡೆನ್ಸಿ ರಸ್ತೆ, ರಿಚ್‌ಮಂಡ್ ರಸ್ತೆ, ಮ್ಯೂಸಿಯಂ ರಸ್ತೆ, ಮಗ್‌ರತ್ ರಸ್ತೆ, ವುಡ್ ಸ್ಟ್ರೀಟ್, ಕ್ಯಾಂಪ್‌ಬೆಲ್ ರಸ್ತೆ, ಹೇಯ್ಸ್ ರಸ್ತೆ ಮತ್ತು ಕಾನ್ವೆಂಟ್ ರಸ್ತೆಗಳಲ್ಲಿ ವಾಹನಗಳ ಸಂಚಾರ ಒತ್ತಡ ಅಧಿಕಗೊಂಡು ಸಂಚಾರ ಸ್ಥಗಿತಗೊಳ್ಳುವುದಲ್ಲದೆ ರಸ್ತೆ ಅಪಘಾತಗಳಿಗೂ ಕಾರಣವಾಗಿದ್ದರಿಂದ ಈ ರಸ್ತೆಗಳಲ್ಲಿನ ಸಂಚಾರ ದಟ್ಟಣೆಯನ್ನು ವ್ಯವಸ್ಥಿತವಾಗಿ ನಿಯಂತ್ರಿಸಲು ಹಾಗೂ ಸಂಚಾರವು ಸರಾಗವಾಗಿ ಚಲಿಸಲು ಸಹಾಯಕವಾಗುವಂತೆ ಮತ್ತು ಸಾರ್ವಜನಿಕರ ಸಂಚಾರದ ಹಿತದೃಷ್ಟಿಯಿಂದ ಏಕಮುಖ ಸಂಚಾರ ವ್ಯವಸ್ಥೆ ಹಾಗೂ ಇತರೆ ಸಂಚಾರ ನಿರ್ಬಂಧನೆಗಳನ್ನು ಜಾರಿಗೆ ತರಲಾಗಿದೆ. ಈ ರಸ್ತೆಗಳಲ್ಲಿ ವಾಹನಗಳನ್ನು ನಿಲುಗಡೆಗೊಳಿಸುತ್ತಿರುವುದರಿಂದ ವಾಹನಗಳ ಸುಗಮ ಸಂಚಾರಕ್ಕೆ ಹಾಗೂ ಜಾರಿಗೆ ತಂದಿರುವ ಸಂಚಾರ ವ್ಯವಸ್ಥೆಯ ಯಶಸ್ಸಿಗೆ ಅಡ್ಡಿಯಾಗಿರುವುದು ಕಂಡುಬಂದಿರುತ್ತೆ. ಈ ರಸ್ತೆಗಳಲ್ಲಿ ಜಾರಿಗೆ ತಂದಿರುವ ಸಂಚಾರ ಮಾರ್ಪಾಡುಗಳನ್ನು ಯಶಸ್ವಿಗೊಳಿಸಲು ವಾಹನ ನಿಲುಗಡೆಯನ್ನು ನಿಷೇಧಿಸುವುದು ಅವಶ್ಯಕವಾಗಿರುತ್ತೆ.

ಆದ್ದರಿಂದ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಭಾರತೀಯ ಮೋಟಾರ್ ವಾಹನ ಕಾಯ್ದೆ 1988ರ ಕಲಂ 115 ಹಾಗೂ ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಕಾಯ್ದೆ 1960ರ ಕಲಂ 3ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ವಾಹನ ನಿಲುಗಡೆಯನ್ನು ನಿರ್ಬಂಧಿಸಿ ಆದೇಶಿಸಿದ್ದೇನೆ.

ರೆಸಿಡೆನ್ಸಿ ರಸ್ತೆ : ಈ ರಸ್ತೆಯಲ್ಲಿ ಆಶೀರ್ವಾದಂ ವೃತ್ತದಿಂದ ಮೆಯೋ ಹಾಲ್ ಜಂಕ್ಷನ್ ವರೆಗೆ ರಸ್ತೆಯ ಎರಡೂ ಕಡೆ ವಾಹನ ನಿಲುಗಡೆಯನ್ನು ನಿಷೇಧಿಸಿದೆ.

ಮಗ್‌ರತ್ ರಸ್ತೆ : ಮಗ್‌ರತ್ ರಸ್ತೆಯಲ್ಲಿ ರಸ್ತೆಯ ಎರಡೂ ಕಡೆ ವಾಹನ ನಿಲುಗಡೆಯನ್ನು ನಿಷೇಧಿಸಿದೆ.

ಎಂ. ಜಿ. ರಸ್ತೆ : ಎಂ. ಜಿ. ರಸ್ತೆಯಲ್ಲಿ ಮೆಯೋ ಹಾಲ್ ಜಂಕ್ಷನ್‌ನಿಂದ ವೆಬ್ಸ್ ಜಂಕ್ಷನ್ ವರೆಗೆ ರಸ್ತೆಯ ಎರಡೂ ಕಡೆ ವಾಹನ ನಿಲುಗಡೆಯನ್ನು ನಿಷೇಧಿಸಿದೆ.

ಕಮೀಷರಿಯೇಟ್ ರಸ್ತೆ : ಈ ರಸ್ತೆಯಲ್ಲಿ ಮೆಯೋ ಹಾಲ್ ನಿಂದ ಶಾಪರ್ಸ್ ಸ್ಟಾಪ್ ಜಂಕ್ಷನ್ ವರೆಗೆ ರಸ್ತೆಯ ಎರಡೂ ಕಡೆ ವಾಹನ ನಿಲುಗಡೆಯನ್ನು ನಿಷೇಧಿಸಿದೆ.

ಮದರ್ ತೆರೇಸಾ ರಸ್ತೆ : ಈ ರಸ್ತೆಯಲ್ಲಿ ಅಶೋಕನಗರ ಪೊಲೀಸ್ ಠಾಣೆಯಿಂದ ಮದರ್ ತೆರೇಸಾ ಸರ್ಕಲ್ ವರೆಗೆ ರಸ್ತೆಯ ಎರಡೂ ಕಡೆ ವಾಹನ ನಿಲುಗಡೆಯನ್ನು ನಿಷೇಧಿಸಿದೆ.

ಕ್ಯಾಂಪ್‌ಬೆಲ್ ರಸ್ತೆ : ಕ್ಯಾಂಪ್‌ಬೆಲ್ ರಸ್ತೆಯಲ್ಲಿ ಜಾನ್ಸನ್ ಮಾರ್ಕೆಟ್ ಜಂಕ್ಷನ್‌ನಿಂದ ಡಿಸೋಜ ವೃತ್ತದವರೆಗೆ ರಸ್ತೆಯ ಎರಡೂ ಕಡೆ ವಾಹನ ನಿಲುಗಡೆಯನ್ನು ನಿಷೇಧಿಸಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 22.01.2005 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 20.01.2005 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

ಎಸ್. ಮರಿಸ್ವಾಮಿ

ಪಿ.ಆರ್.269 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

## ನೋಂದಣಿ ಪ್ರಾಧಿಕಾರ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೈಲಹೊಂಗಲ ಇವರ ನಡುವಳಿಕೆಗಳು

**ಉಪಸ್ಥಿತರು :** ಶ್ರೀ ಐ. ಪಿ. ಜಮಾದಾರ, ಸಹಾಯಕ ಪ್ರಾ.ಸಾ.ಅ. ಬೈಲಹೊಂಗಲ

**ವಿಷಯ :** ವಾಹನ ಸಂಖ್ಯೆ: ಎಂಇಡಬ್ಲ್ಯೂ-8485 ನೋಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** 1. ವಾಹನ ಮಾಲೀಕರ ಅರ್ಜಿ ದಿನಾಂಕ: 31.12.04.

2. ವಾಹನ ನಿರೀಕ್ಷಕರ ವರದಿ ದಿನಾಂಕ:

**ಪ್ರಸ್ತಾವನೆ:**

ವಾಹನ ಸಂಖ್ಯೆ: ಎಂಇಡಬ್ಲ್ಯೂ-8485 ಮಾಲೀಕರು ವಾಹನದ ತೆರಿಗೆಯನ್ನು ದಿನಾಂಕ: 31.12.2004 ವರೆಗೆ ಪಾವತಿಸಿ, ವಾಹನವು ತುಕ್ಕುಹಿಡಿದು ಹಾಳಾಗಿದೆ ಹಾಗೂ ರಿಪೇರಿಯಾಗದ ಸ್ಥಿತಿಯಲ್ಲಿದೆ ಎಂಬ ಕಾರಣ ನೀಡಿ ನೋಂದಣಿ ರದ್ದುಪಡಿಸಲು ವಿನಂತಿಸಿಕೊಂಡಿದ್ದಾರೆ. ಅದಕ್ಕೆ ಪೂರಕವಾಗಿ ಈ ಕಚೇರಿಯ ವಾಹನ ನಿರೀಕ್ಷಕರು ತಮ್ಮ ನೋಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿದ್ದಾರೆ. ವಾಹನ ಮಾಲೀಕರ ಕೋರಿಕೆಯ ಮೇರೆಗೆ

ಈ ಮೇಲಿನ ಅಂಶಗಳನ್ನು ಪರಿಗಣಿಸಿ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

### ಆದೇಶ ಸಂಖ್ಯೆ: ಸಪ್ರಾಸಾಅ:ನೊಂ:ಎಂಇಡಬ್ಲ್ಯೂ:8485: 04-05 ದಿನಾಂಕ: 31ನೇ ಡಿಸೆಂಬರ್ 2004

ಮೇಲ್ಕಂಡ ವಿಷಯವನ್ನು ಪರಿಗಣಿಸಿ, ಮೋಟಾರು ವಾಹನ ಕಾಯ್ದೆ 1988 ಕಲಂ 59ರ ಅಡಿಯಲ್ಲಿ ದತ್ತವಾದ ಅಧಿಕಾರದ ಮೇರೆಗೆ ನೋಂದಣಿ ಅಧಿಕಾರಿ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬಳ್ಳಾರಿ ಆದ ನಾನು ವಾಹನ ಸಂಖ್ಯೆ: ಎಂಇಡಬ್ಲ್ಯೂ-8485ಯ ವಾಹನದ ನೋಂದಣಿಯನ್ನು ದಿನಾಂಕ: 31.12.04 ರಿಂದ ಅನ್ವಯವಾಗುವಂತೆ ಸದರಿ ವಾಹನದ ನೋಂದಣಿಯನ್ನು ವಾಹನದ ಮೇಲೆ ಸರಕಾರಕ್ಕೆ ಬರಬೇಕಾದ ಬಾಕಿ ಏನಾದರೂ ಇದ್ದರೆ ಮಾಲೀಕರೇ ಪಾವತಿಮಾಡಬೇಕೆಂಬ ನಿಬಂಧನೆಯೊಂದಿಗೆ ರದ್ದುಪಡಿಸಲಾಗಿದೆ.

**ವಾಹನದ ವಿವರಗಳು:**

| | | | |
|---|---|---|---|
| 1) | ನೋಂದಣಿ ಸಂಖ್ಯೆ | : | ಎಂಇಡಬ್ಲ್ಯೂ-8485 |
| 2) | ವಾಹನದ ವರ್ಗ | : | ಹೆಚ್.ಜಿ.ವಿ |
| 3) | ತಯಾರಕರ ಹೆಸರು | : | ಟಾಟಾ |
| 4) | ಅಡಿಗಟ್ಟು ಸಂಖ್ಯೆ | : | 344052679278 |
| 5) | ಯಂತ್ರದ ಸಂಖ್ಯೆ | : | 692 ಡಿಡಬ್ಲ್ಯೂಡಿ 6719788 |
| 6) | ಮಾಲೀಕರ ಹೆಸರು: ವಿಳಾಸ | : | ಶ್ರೀ ಆರ್. ಎಸ್. ಹಾದಿಮನಿ ಚಿಕ್ಕಬಾಗೇವಾಡಿ ಬೈಲಹೊಂಗಲ |

ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ,

ಪಿ.ಆರ್.270 ಬೈಲಹೊಂಗಲ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ ಪತ್ರ

### ನಂ: ಎಲ್‌ಆರ್‌ಎಫ್:ಸಿಆರ್:76:04-05 ದಿನಾಂಕ: 13ನೇ ಜನವರಿ 2005

**ವಿಷಯ :** ದಿ ಸೋಷಿಯಲ್ ಸರ್ವೀಸ್ ಸೊಸೈಟಿ ಆಫ್ ದಿ ಸಿಸ್ಟರ್ಸ್ ಆಫ್ ಸೇಂಟ್ ಜಾನ್ ದಿ ಬ್ಯಾಪಿಸ್ಟ್, ನಂ. 341, ಈಸ್ಟರ್ನ್, 1ನೇ ಅಡ್ಡರಸ್ತೆ, ಅಣ್ಣಾನಗರ್, ಮಧುರೈ-625020 ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಗುಂಜೂರು ಗ್ರಾಮದ ಸ.ನಂ. 91ರಲ್ಲಿ ಒಟ್ಟು 2.00 ಎಕರೆ: ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ದಾನವಾಗಿ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ದಿ ಸೋಷಿಯಲ್ ಸರ್ವೀಸ್ ಸೊಸೈಟಿ ಆಫ್ ದಿ ಸಿಸ್ಟರ್ಸ್ ಆಫ್ ಸೇಂಟ್ ಜಾನ್ ದಿ ಬ್ಯಾಪಿಸ್ಟ್, ನಂ. 341, ಈಸ್ಟರ್ನ್, 1ನೇ ಅಡ್ಡರಸ್ತೆ, ಅಣ್ಣಾನಗರ್, ಮಧುರೈ-625020 ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಗುಂಜೂರು ಗ್ರಾಮದ ಸ.ನಂ.91 ರಲ್ಲಿ ಒಟ್ಟು 2-00 ಎಕರೆ:ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ದಾನವಾಗಿ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ರವರ ಪತ್ರದ ನಂ. ಎಲ್‌ಆರ್‌ಎಫ್:ಸಿಆರ್:256/04-05 ದಿನಾಂಕ: 29.12.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ.91 ರಲ್ಲಿ ಒಟ್ಟು 2.00 ಎಕರೆ:ಗುಂಟೆ ಜಮೀನನ್ನು ದಾನವಾಗಿ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I)(II)ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಸಂಘ ಸಂಸ್ಥೆಗಳ ನೋಂದಣಾಧಿಕಾರಿಗಳ ಕಛೇರಿ, ಮಧುರೈ, ತಮಿಳುನಾಡಿನಲ್ಲಿ ದಿನಾಂಕ: 16.4.1977 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ದಾನವಾಗಿ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (I)(II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಗುಂಜೂರು ಗ್ರಾಮದ ಸ.ನಂ. 91ರಲ್ಲಿ ಒಟ್ಟು 2.00 ಎಕರೆ:ಗುಂಟೆ ಜಮೀನನ್ನು ದಿ ಸೋಷಿಯಲ್ ಸರ್ವೀಸ್ ಸೊಸೈಟಿ ಆಫ್ ದಿ ಸಿಸ್ಟರ್ಸ್ ಆಫ್ ಸೇಂಟ್ ಜಾನ್ ದಿ ಬ್ಯಾಪಿಸ್ಟ್ ನಂ. 341 ಈಸ್ಟರ್ನ್, 1ನೇ ಅಡ್ಡರಸ್ತೆ, ಅಣ್ಣಾನಗರ್, ಮಧುರೈ-625020 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I)(II)ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ. ಕಂಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯೂನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ದಾನವಾಗಿ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೇಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ. ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ).,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.271

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ ಪತ್ರ

### ನಂ: ಎಲ್‌ಆರ್‌ಎಫ್:ಸಿಆರ್:92:04-05 ದಿನಾಂಕ: 13ನೇ ಜನವರಿ 2005

**ವಿಷಯ :** ಸೊಸೈಟಿ ಆಫ್ ದಿ ದಿವಿನೆ ಸಾವಿಯರ್ ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಗುಂಜೂರು ಗ್ರಾಮದ ಸ.ನಂ. 93/1 ರಲ್ಲಿ ಒಟ್ಟು 1-20 ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಸೊಸೈಟಿ ಆಫ್ ದಿ ದಿವಿನೆ ಸಾವಿಯರ್ ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಗುಂಜೂರು ಗ್ರಾಮದ ಸ.ನಂ. 93/1 ರಲ್ಲಿ ಒಟ್ಟು 1.20 ಎಕರೆ:ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ರವರ ಪತ್ರದ ನಂ. ಎಲ್‌ಆರ್‌ಎಫ್:ಸಿಆರ್:382/04-05 ದಿನಾಂಕ: 29.12.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ. 93/1 ರಲ್ಲಿ ಒಟ್ಟು 1.20 ಎಕರೆ:ಗುಂಟೆ ಜಮೀನನ್ನು ಕ್ರಯಕ್ಕೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I)(II)ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಸಂಘ ಸಂಸ್ಥೆಗಳ ನೋಂದಣಾಧಿಕಾರಿಗಳ ಕಛೇರಿ, ಬೆಂಗಳೂರು ಜಿಲ್ಲೆಯಲ್ಲಿ ದಿನಾಂಕ: 24.8.1989 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಕ್ರಯಕ್ಕೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳೂ ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (I)(II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಗುಂಜೂರು ಗ್ರಾಮದ ಸ.ನಂ. 93/1 ರಲ್ಲಿ ಒಟ್ಟು 1-20 ಎಕರೆ:ಗುಂಟೆ ಜಮೀನನ್ನು ಸೊಸೈಟಿ ಆಫ್ ದಿ ದಿವಿನೆ ಸಾವಿಯರ್‌ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಗುಂಜೂರು ಗ್ರಾಮ, ಬೆಂಗಳೂರು ಪೂರ್ವ ತಾಲ್ಲೂಕು ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I)(II)ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ಕಂಇ 47 ಶಾಸನ 2001 ಬೆಂಗಳೂರು ದಿನಾಂಕ:

23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ದಾನವಾಗಿ ಪಡೆಯಲು ಅನುಮತಿ ನೀಡಲಾಗಿದೆಯೇ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೇಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ. ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ).,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.272

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಸೂಚನೆ

### ನಂ: ಎಲ್‌ಆರ್‌ಎಫ್:ಸಿಆರ್:95:2004-05 ದಿನಾಂಕ: 12ನೇ ಜನವರಿ 2005

**ವಿಷಯ :** ಗ್ರೇಸ್ ಚಿಲ್ಡ್ರನ್ ಹೋಂ ನಂ. 189 6ನೇ ಮುಖ್ಯರಸ್ತೆ, ಡಿಫೆನ್ಸ್ ಕಾಲೋನಿ ಇಂದಿರಾನಗರ, ಬೆಂಗಳೂರು-560038 ರವರು ಬೆಂಗಳೂರು ಪೂರ್ವ ತಾಲ್ಲೂಕು ಬಿದರಹಳ್ಳಿ ಹೋಬಳಿ ಚಿಕ್ಕಗುಬ್ಬಿ ಗ್ರಾಮದ ಸ.ನಂ. 44 ರಲ್ಲಿ ಒಟ್ಟು 0-10 ಗುಂಟೆ (ಹತ್ತು ಗುಂಟೆ) ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

ಗ್ರೇಸ್ ಚಿಲ್ಡ್ರನ್ ಹೋಂ ನಂ. 189 6ನೇ ಮುಖ್ಯರಸ್ತೆ ಡಿಫೆನ್ಸ್ ಕಾಲೋನಿ, ಇಂದಿರಾನಗರ, ಬೆಂಗಳೂರು-560038 ರವರು ಬೆಂಗಳೂರು ಪೂರ್ವ ತಾಲ್ಲೂಕು ಬಿದರಹಳ್ಳಿ ಹೋಬಳಿ, ಚಿಕ್ಕಗುಬ್ಬಿ ಗ್ರಾಮದ ಸ.ನಂ.44 ರಲ್ಲಿ ಒಟ್ಟು 0-10 ಗುಂಟೆ (ಹತ್ತು ಗುಂಟೆ) ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಬೆಂಗಳೂರು ಉತ್ತರ ತಾಲ್ಲೂಕು, ರವರ ಪತ್ರದ ನಂ.ಎಲ್‌ಆರ್‌ಎಫ್ ಸಿಆರ್ 341/04-05 ದಿನಾಂಕ: 06.01.2004 ರಲ್ಲಿ ಪ್ರಸ್ತಾಪಿತ ಗ್ರಾಮಗಳು ಮೇಲ್ಕಂಡ ಸ.ನಂ. 44 ರಲ್ಲಿ ಒಟ್ಟು 0-10 ಗುಂಟೆ (ಹತ್ತು ಗುಂಟೆ) ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I)(II)ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪನೋಂದಣಾಧಿಕಾರಿಗಳ ಕಛೇರಿ, ಶಿವಾಜಿನಗರ ಉಪನೋಂದಣಾ ಕಛೇರಿಯಲ್ಲಿ ದಿನಾಂಕ: 24.05.2004 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಒಪ್ಪಂದ ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳೂ ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(I)(II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಚಿಕ್ಕಗುಬ್ಬಿ ಗ್ರಾಮದ ಸ.ನಂ.44 ರಲ್ಲಿ ಒಟ್ಟು 0-10 ಗುಂಟೆ (ಹತ್ತು ಗುಂಟೆ) ಜಮೀನನ್ನು ಗ್ರೇಸ್ ಚಿಲ್ಡ್ರನ್ ಹೋಂ ನಂ. 189 6ನೇ ಮುಖ್ಯರಸ್ತೆ, ಡಿಫೆನ್ಸ್ ಕಾಲೋನಿ, ಇಂದಿರಾನಗರ, ಬೆಂಗಳೂರು-560038 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I)(II)ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ. ಕಂಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಶೈಕ್ಷಣಿಕ ಮತ್ತು ಚಾರಿಟಬಲ್ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ದಾನವಾಗಿ ಪಡೆಯಲು ಅನುಮತಿ ನೀಡಲಾಗಿದೆಯೇ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೇಯಿಡ್ ಆಫ್ ಷೇರು ಬಂಡವಾಳ ಹೊಂದಿರುವ

ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ. ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್.273 ವಿಶೇಷ ಜಿಲ್ಲಾಧಿಕಾರಿಗಳು (ಕಂ)., ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ ಪತ್ರ

## ನಂ: ಎಲ್‌ಆರ್‌ಎಫ್:ಸಿಆರ್:77:2004-05 ದಿನಾಂಕ: 13ನೇ ಜನವರಿ 2005

**ವಿಷಯ :** ದಿ ಸೊಸೈಟಿ ಆಫ್ ದಿ ಬ್ರದರ್ಸ್ ಆಫ್ ಸೇಂಟ್ ಫ್ಯಾಟ್ರಿಕ್ ಇಂಡಿಯಾ, ಮೌಂಟ್ ಸೇಂಟ್ ಮೇರೀಸ್ ಸ್ಕೂಲ್, 75 ಪ್ಯಾರಡೆ ರಸ್ತೆ, ದೆಹಲಿ ಕಂಟೋನ್‌ಮೆಂಟ್, ನ್ಯೂಡೆಲ್ಲಿ ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮುಳ್ಳೂರು ಗ್ರಾಮದ ಸ.ನಂ. 43 ರಲ್ಲಿ ಒಟ್ಟು 1-4.12 ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ದಾನವಾಗಿ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ದಿ ಸೊಸೈಟಿ ಆಫ್ ದಿ ಬ್ರದರ್ಸ್ ಆಫ್ ಸೇಂಟ್ ಫ್ಯಾಟ್ರಿಕ್ ಇಂಡಿಯಾ, ಮೌಂಟ್ ಸೇಂಟ್ ಮೇರೀಸ್ ಸ್ಕೂಲ್, 75, ಪ್ಯಾರಡೆ ರಸ್ತೆ, ದೆಹಲಿ ಕಂಟೋನ್‌ಮೆಂಟ್, ನ್ಯೂಡೆಲ್ಲಿ ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮುಳ್ಳೂರು ಗ್ರಾಮದ ಸ.ನಂ. 43 ರಲ್ಲಿ ಒಟ್ಟು 1-4.12 ಎಕರೆ:ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ದಾನವಾಗಿ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ರವರ ಪತ್ರದ ನಂ. ಎಲ್‌ಆರ್‌ಎಫ್:ಸಿಆರ್ 257/04-05 ದಿನಾಂಕ: 29.12.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ.43 ರಲ್ಲಿ ಒಟ್ಟು 1-4.12 ಎಕರೆ:ಗುಂಟೆ ಜಮೀನನ್ನು ದಾನವಾಗಿ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I)(II)ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಸಂಘ ಸಂಸ್ಥೆಗಳ ನೋಂದಾಣಾಧಿಕಾರಿಗಳ ಕಛೇರಿ, ದೆಹಲಿಯಲ್ಲಿ ದಿನಾಂಕ: 19.12.1934 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ದಾನವಾಗಿ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(I)(II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ,79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮುಳ್ಳೂರು ಗ್ರಾಮದ ಸ.ನಂ.43 ರಲ್ಲಿ ಒಟ್ಟು 1-4.12 ಎಕರೆ:ಗುಂಟೆ ಜಮೀನನ್ನು ದಿ ಸೊಸೈಟಿ ಆಫ್ ದಿ ಬ್ರದರ್ಸ್ ಆಫ್ ಸೇಂಟ್ ಫ್ಯಾಟ್ರಿಕ್ ಇಂಡಿಯಾ, ಮೌಂಟ್ ಸೇಂಟ್ ಮೇರೀಸ್ ಸ್ಕೂಲ್, 75, ಪ್ಯಾರಡೆ ರಸ್ತೆ, ದೆಹಲಿ ಕಂಟೋನ್‌ಮೆಂಟ್, ನ್ಯೂಡೆಲ್ಲಿ ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I)(II)ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ. ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಶೈಕ್ಷಣಿಕ ಮತ್ತು ಚಾರಿಟಬಲ್ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ದಾನವಾಗಿ ಪಡೆಯಲು ಅನುಮತಿ ನೀಡಲಾಗಿದೆಯೇ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೇಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.

5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ. ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್.274 ವಿಶೇಷ ಜಿಲ್ಲಾಧಿಕಾರಿಗಳು (ಕಂ)., ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ ಪತ್ರ ನಂ: ಎಲ್ಆರ್ಎಫ್:ಸಿಆರ್:125:2004-05 ದಿನಾಂಕ: 31ನೇ ಜನವರಿ 2005

**ವಿಷಯ :** ಎಸ್.ಎಸ್.ಆರ್. ಮೆಡಿಕಲ್, ಎಜ್ಯುಕೇಷನಲ್ ಮತ್ತು ಚಾರಿಟಬಲ್ ಟ್ರಸ್ಟ್, ನಂ. 9, ಕೆ.ವಿ.ಲೇನ್, ಕಾಟನ್ ಪೇಟೆ ಕ್ರಾಸ್, ಬೆಂಗಳೂರು-560053 ರವರು, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಕೋಗಿಲು ಗ್ರಾಮದ ಸ.ನಂ.12 ರಲ್ಲಿ ಒಟ್ಟು 0-38 ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕ್ರಯಕ್ಕೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಎಸ್.ಎಸ್.ಆರ್. ಮೆಡಿಕಲ್, ಎಜ್ಯುಕೇಷನಲ್ ಮತ್ತು ಚಾರಿಟಬಲ್ ಟ್ರಸ್ಟ್, ನಂ. 9, ಕೆ.ವಿ.ಲೇನ್, ಕಾಟನ್ ಪೇಟೆ ಕ್ರಾಸ್, ಬೆಂಗಳೂರು-560053 ರವರು, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಕೋಗಿಲು ಗ್ರಾಮದ ಸ.ನಂ.12 ರಲ್ಲಿ ಒಟ್ಟು 0-38 ಗುಂಟೆ ಜಮೀನನ್ನು ಶೈಕ್ಷಣಿಕ ಹಾಗೂ ಧಾರ್ಮಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕ್ರಯಕ್ಕೆ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ರವರ ಪತ್ರದ ನಂ. ಎಲ್ಆರ್ಎಫ್:(ಬಿ.ಎನ್.ಎ)ಸಿಆರ್ 206/04-05 ದಿನಾಂಕ: 29.1.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ.12 ರಲ್ಲಿ ಒಟ್ಟು 0-38 ಗುಂಟೆ ಜಮೀನನ್ನು ಕ್ರಯಕ್ಕೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I)(II)ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪ ನೋಂದಾಣಾಧಿಕಾರಿಗಳ ಕಛೇರಿ, ಗಾಂಧಿನಗರ ಉಪನೋಂದಣಾ ಕಛೇರಿಯಲ್ಲಿ ದಿನಾಂಕ: 23.8.1998 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಕ್ರಯಕ್ಕೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(I)(II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ,79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಕೋಗಿಲು ಗ್ರಾಮದ ಸ.ನಂ.12 ರಲ್ಲಿ ಒಟ್ಟು 0-38 ಗುಂಟೆ ಜಮೀನನ್ನು ಎಸ್.ಎಸ್.ಆರ್. ಮೆಡಿಕಲ್, ಎಜ್ಯುಕೇಷನಲ್ ಮತ್ತು ಚಾರಿಟಬಲ್ ಟ್ರಸ್ಟ್, ನಂ. 9, ಕೆ.ವಿ.ಲೇನ್, ಕಾಟನ್ ಪೇಟೆ ಕ್ರಾಸ್, ಬೆಂಗಳೂರು-560053 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(I)(II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ. ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಕ್ರಯಕ್ಕೆ ಪಡೆಯಲು ಅನುಮತಿ ನೀಡಲಾಗಿದೆಯೇ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೇಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ. ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್.275 ವಿಶೇಷ ಜಿಲ್ಲಾಧಿಕಾರಿಗಳು (ಕಂ)., ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ ಪತ್ರ

### ನಂ: ಎಲ್‌ಆರ್‌ಎಫ್:ಸಿಆರ್:96:04-05 ದಿನಾಂಕ: 23ನೇ ಜನವರಿ 2005

**ವಿಷಯ :** ಶ್ರೀ ನಾರಾಯಣ ದಾಮ(ರಿ), ನಂ. 27/2, ಸೌಗಂಧಿಕಾ, 3ನೇ ಅಡ್ಡರಸ್ತೆ, 6ನೇ ಮುಖ್ಯರಸ್ತೆ, ಮತ್ತಿಕೆರೆ ಬಡಾವಣೆ, ಬೆಂಗಳೂರು-54 ರವರು, ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಕುದುರೆಗೆರೆ ಗ್ರಾಮದ ಸ.ನಂ. 92/1 ರಲ್ಲಿ ಒಟ್ಟು 2-00 ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ದಾನವಾಗಿ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಶ್ರೀ ನಾರಾಯಣ ದಾಮ(ರಿ), ನಂ. 27/2, ಸೌಗಂಧಿಕಾ, 3ನೇ ಅಡ್ಡರಸ್ತೆ, 6ನೇ ಮುಖ್ಯರಸ್ತೆ, ಮತ್ತಿಕೆರೆ ಬಡಾವಣೆ, ಬೆಂಗಳೂರು-54 ರವರು, ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಕುದುರೆಗೆರೆ ಗ್ರಾಮದ ಸ.ನಂ. 92/1 ರಲ್ಲಿ ಒಟ್ಟು 2-00 ಎಕರೆ:ಗುಂಟೆ ಜಮೀನನ್ನು ಶೈಕ್ಷಣಿಕ ಹಾಗೂ ಧಾರ್ಮಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ದಾನವಾಗಿ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ರವರ ಪತ್ರದ ನಂ. ಎಲ್‌ಆರ್‌ಎಫ್:(1)ಸಿಆರ್ 113/04-05 ದಿನಾಂಕ: 3.1.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ.92/1 ರಲ್ಲಿ ಒಟ್ಟು 2-00 ಎಕರೆ:ಗುಂಟೆ ಜಮೀನನ್ನು ದಾನವಾಗಿ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I)(II)ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪ ನೋಂದಣಾಧಿಕಾರಿಗಳ ಕಛೇರಿ, ರಾಜಾಜಿನಗರ, ಉಪನೋಂದಣಾ ಕಛೇರಿಯಲ್ಲಿ ದಿನಾಂಕ: 20.1.2004 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ದಾನವಾಗಿ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಹಾಗೂ ಧಾರ್ಮಿಕ ಉದ್ದೇಶಕ್ಕೆ $^{1}/_{4}$ ಯೂನಿಟ್ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(I)(II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ,79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಕುದುರೆಗೆರೆ ಗ್ರಾಮದ ಸ.ನಂ.92/1 ರಲ್ಲಿ ಒಟ್ಟು 2-00 ಎಕರೆ:ಗುಂಟೆ ಜಮೀನನ್ನು ಶ್ರೀ ನಾರಾಯಣ ದಾಮ(ರಿ) ನಂ.27/2, ಸೌಗಂಧಿಕಾ, 3ನೇ ಅಡ್ಡರಸ್ತೆ, 6ನೇ ಮುಖ್ಯರಸ್ತೆ, ಮತ್ತಿಕೆರೆ ಬಡಾವಣೆ, ಬೆಂಗಳೂರು-54 ರವರಿಗೆ ಶೈಕ್ಷಣಿಕ ಹಾಗೂ ಧಾರ್ಮಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(I)(II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ. ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್ ಹಾಗೂ ಧಾರ್ಮಿಕ ಉದ್ದೇಶಕ್ಕೆ $^{1}/_{4}$ ಯೂನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಕ್ರಯಕ್ಕೆ ಪಡೆಯಲು ಅನುಮತಿ ನೀಡಲಾಗಿದೆಯೇ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೇಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ. ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್.276 ವಿಶೇಷ ಜಿಲ್ಲಾಧಿಕಾರಿಗಳು (ಕಂ)., ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಸೂಚನೆ ಸಂಖ್ಯೆ: ಎಲ್‌ಆರ್‌ಎಫ್:ಸಿಆರ್:107:04-05 ದಿನಾಂಕ: 17ನೇ ಜನವರಿ 2005

**ವಿಷಯ :** ಸೇಂಟ್ ಲಾರೆನ್ಸ್ ಎಜ್ಯುಕೇಷನ್ ಸೊಸೈಟಿ ರವರು ಆನೇಕಲ್ ತಾಲ್ಲೂಕು ಜಿಗಣಿ ಹೋಬಳಿ, ಗೊಲ್ಲಹಳ್ಳಿ ಗ್ರಾಮದ ಸ.ನಂ.13,14,15,16/1,17,18 ಮತ್ತು 19ರಲ್ಲಿ 8-13 ಎಕರೆ/ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಸೇಂಟ್ ಲಾರೆನ್ಸ್ ಎಜ್ಯುಕೇಷನ್ ಸೊಸೈಟಿ ರವರು ಆನೇಕಲ್ ತಾಲ್ಲೂಕು ಜಿಗಣಿ ಹೋಬಳಿ, ಗೊಲ್ಲಹಳ್ಳಿ ಗ್ರಾಮದ ಸ.ನಂ.13,14,15,16/1,17,18 ಮತ್ತು 19ರಲ್ಲಿ 8-13 ಎಕರೆ/ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪವಿಭಾಗ ರವರ ಪತ್ರದ ಸಂಖ್ಯೆ: ಎಲ್‌ಆರ್‌ಎಫ್:(109)ಸಿಆರ್ 51/04-05 ದಿನಾಂಕ: 31.12.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಸರ್ವೆ ನಂಬರ್ 13, 14, 15, 16/1, 17, 18 ಮತ್ತು 19ರಲ್ಲಿ 8-13 ಎಕರೆ:ಗುಂಟೆ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I)(II)ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಸಹಕಾರ ಸಂಘಗಳ ನೋಂದಣಾಧಿಕಾರಿಗಳ ಕಛೇರಿ, ಮುಂಬೈಯಲ್ಲಿ ದಿನಾಂಕ:5.5.1985 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(I)(II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ,79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಗೊಲ್ಲಹಳ್ಳಿ ಗ್ರಾಮದ ಸರ್ವೆ.ನಂ.13ರಲ್ಲಿ 0-39 ಗುಂಟೆ 14ರಲ್ಲಿ 3-17 ಎಕರೆ, 15ರಲ್ಲಿ 1-35 ಎಕರೆ, 16/1ರಲ್ಲಿ 0-24 ಗುಂಟೆ, 17ರಲ್ಲಿ 0-23 ಗುಂಟೆ, 18ರಲ್ಲಿ 0-25 ಗುಂಟೆ ಮತ್ತು ಸ.ನಂ.19ರಲ್ಲಿ 1.00 ಎಕರೆ ಒಟ್ಟು 8-13 ಎಕರೆ/ಗುಂಟೆ ಜಮೀನನ್ನು ಸೇಂಟ್ ಲಾರೆನ್ಸ್ ಎಜ್ಯುಕೇಷನ್ ಸೊಸೈಟಿ ಕೇರ್ ಆಫ್ ಸೇಂಟ್ ಲಾರೆನ್ಸ್ ಹೈಸ್ಕೂಲ್, ಠಾಕೂರ್ ಕಾಂಪ್ಲೆಕ್ಸ್, ಅಶಾನಗರ್ ಕಾಂಡಿವಿಲ್ಲಿ ಈಸ್ಟ್, ಮುಂಬೈ400101 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(I)(II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ. ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೇ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೇಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ. ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್.277 ವಿಶೇಷ ಜಿಲ್ಲಾಧಿಕಾರಿಗಳು (ಕಂ)., ಬೆಂಗಳೂರು ಜಿಲ್ಲೆ, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಉಪ ವಿಭಾಗ-2 ಬಿಜಾಪುರ**
**ಪ್ರಕರಣ ಸಂಖ್ಯೆ: ಕಾಅಬಿ:ಕಾನಪ:ಮಪ್ರ:ಎಸ್‌ಆರ್-14:2005 ದಿನಾಂಕ: 28ನೇ ಜನವರಿ 2005**

**ಅರ್ಜಿದಾರರು:**

1. ಶ್ರೀಮತಿ ಮಮತಾಜ ಗಂಡ ಖಾಸಿಂಸಾಬ ಮುಲ್ಲಾ
2. ಶ್ರೀಮತಿ, ರುಕಸಾನ ಉರ್ಫ್ ಮಾಲನ ಗಂಡ ಸೈಫನ್‌ಸಾಬ್ ಮುಲ್ಲಾ
3. ಕು: ಶೋಹಲ ತಂದೆ ಸೈಫನ್‌ಸಾಬ್ ಮುಲ್ಲಾ ವಾಸ: ಗುಂಡಕಿ, ತಾಲ್ಲೂಕ್: ಜಿಲ್ಲೆ-ಬಿಜಾಪುರ

**ವಿರುದ್ಧ**

**ಪ್ರತಿವಾದಿಗಳು:**

1. ಶಕುಂತಲ ಗಂಡ ಅಡಗೊಂನ ವಾಡೆಕರ್, ಎಟ್ಟ್: ಪೋಸ್ಟ್ ಅಸ್ಕಿ ತಾಲ್ಲೂಕ್ ವಾಲವಾ, ಜಿಲ್ಲೆ ಸಾಂಗಲಿ
2. ಬ್ರ್ಯಾಂಚ್ ಮ್ಯಾನೇಜರ್, ನ್ಯಾಶನಲ್ ಇನ್ಸೂರೆನ್ಸ್ ಕಂಪನಿ, ಲಿಮಿಟೆಡ್, ಬಿಜಾಪುರ.
3. ನೀಲಪ್ಪ ಸೋಮಪ್ಪ ಸ್ವಾಮಿ, ವಾಸ-ಅಸ್ಕಿ, ನರಸೋಬ ಮಂದಿರದ ಹತ್ತಿರ, ಹ್ಯಾಂಗ್‌ಗಾರ್ಡನ್, ಎಟ್ಟ್-ಅಸ್ಕಿ, ತಾಲ್ಲೂಕು ವಾಲವಾ, ಜಿಲ್ಲೆ, ಸಾಂಗಲಿ.

**ಪ್ರಕಟಣೆ:**

ಶ್ರೀ:ಶ್ರೀಮತಿ: 1) ಶ್ರೀಮತಿ ಮಮತಾಜ ಗಂಡ ಖಾಸಿಂಸಾಬ ಮುಲ್ಲಾ 2) ಶ್ರೀಮತಿ, ರುಕಸಾನ ಉರ್ಫ್ ಮಾಲನ ಗಂಡ ಸೈಫನ್‌ಸಾಬ ಮುಲ್ಲಾ 3) ಕು:ಶೋಹಲ ತಂದೆ ಸೈಫನ್‌ಸಾಬ ಮುಲ್ಲಾ ಇವರುಗಳಾದ ತಾವು ಮೃತ ಸೈಫನ್‌ಸಾಬ ತಂದೆ ಖಾಸಿಂಸಾಬ ಮುಲ್ಲಾ ಇವರ ತಾಯಿ ಮತ್ತು

ಹೆಂಡತಿ-ಮಗ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ಶಕುಂತಲ ಗಂಡ ಅಡಗೊನ ವಾಡೆಕರ್, ಇವರು ಒಂದನೇ ಪ್ರತಿವಾದಿಗಳಾದ ಶಕುಂತಲ ಗಂಡ ಅಡಗೊನ ವಾಡೆಕರ್ ಇವರ ಟ್ರಾಕ್ಟರ್ ನಂ. ಎಮ್‌ಹೆಚ್-10: ಹೆಚ್-4275 ಟ್ರೇಲರ್ ನಂ. ಎಮ್‌ಹೆಚ್-10: ಹೆಚ್-4276 ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**

ಪಿ.ಆರ್.278 ಕಾರ್ಮಿಕ ಪರಿಹಾರ ಆಯುಕ್ತರು ಉಪವಿಭಾಗ-2 ಬಿಜಾಪುರ ಜಿಲ್ಲೆ, ಬಿಜಾಪುರ.

## ನಗರಾಭಿವೃದ್ಧಿ ಇಲಾಖೆ

### ಅಧಿಸೂಚನೆ ಸಂಖ್ಯೆ: ನಅಇ 359 ಮೈಅಪ್ರಾ 2004 ಬೆಂಗಳೂರು, ದಿನಾಂಕ: 3ನೇ ಫೆಬ್ರವರಿ 2005

ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ದೇವನೂರು 1ನೇ ಹಂತದ ಬಡಾವಣೆಗಾಗಿ ಕ್ಯಾತಮಾರನಹಳ್ಳಿ ಗ್ರಾಮದ ಈ ಕೆಳಕಂಡ ಜಮೀನನ್ನು ಭೂ ಸ್ವಾಧೀನಪಡಿಸಿಕೊಳ್ಳಲು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಅಧಿನಿಯಮ 1987 ಸೆಕ್ಷನ್ 17(1)ರ ಪ್ರಾಥಮಿಕ ಅಧಿಸೂಚನೆಯನ್ನು ದಿನಾಂಕ: 13.5.2004 ರಂದು ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದೆ.

ಈ ಕೆಳಕಂಡ ಜಮೀನುಗಳಲ್ಲಿ ಸಾರ್ವಜನಿಕ ಉದ್ದೇಶಕ್ಕೆ ಅಂದರೆ ದೇವನೂರು 1ನೇ ಹಂತದ ಬಡಾವಣೆ ನಿರ್ಮಾಣಕ್ಕೆ ಅವಶ್ಯಕವಾಗಿರುವುದು ಸರ್ಕಾರಕ್ಕೆ ಮನದಟ್ಟಾಗಿದೆ. ಆದ್ದರಿಂದ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರದ ಅಧಿನಿಯಮ 1987 ಸೆಕ್ಷನ್ 19(1) ಮತ್ತು (2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಜಮೀನನ್ನು ದೇವನೂರು 1ನೇ ಹಂತದ ಬಡಾವಣೆಗಾಗಿ ಭೂ ಸ್ವಾಧೀನಪಡಿಸಿಕೊಳ್ಳಲು ಈ ಕೆಳಕಂಡ ಷರತ್ತಿಗೊಳಪಟ್ಟು ನಿರ್ಧರಿಸಿದೆ.

ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ವಿಶೇಷ ಭೂ ಸ್ವಾಧೀನಾಧಿಕಾರಿಯವರಿಗೆ ಈ ಜಮೀನುಗಳನ್ನು ಭೂ ಸ್ವಾಧೀನಪಡಿಸಿಕೊಳ್ಳಲು ಭೂ ಸ್ವಾಧೀನ ಕಾಯ್ದೆ 1894 ಕಲಂ 3 (ಸಿ) ರನ್ವಯ ಅಧಿಕಾರವನ್ನು ನೀಡಲಾಗಿದೆ.

**ಜಿಲ್ಲೆ :** ಮೈಸೂರು **ತಾಲ್ಲೂಕು :** ಮೈಸೂರು **ಹೋಬಳಿ:** ಕಸಬಾ **ಗ್ರಾಮ:** ಕ್ಯಾತಮಾರನಹಳ್ಳಿ

| ಕ್ರ. ಸಂ. | ಸ. ನಂ. | ಖಾತೆದಾರರು ಅನುಭವದಾರರ ಹೆಸರು | ಸ್ವತ್ತಿನ ವಿವರಗಳು | | ಕಂದಾಯ | ಚೌತರ್ಪ | | | | ಭೂಸ್ವಾಧೀನ ಪಡಿಸಿಕೊಳ್ಳಬೇಕಾದ ವಿಸ್ತೀರ್ಣ |
|---|---|---|---|---|---|---|---|---|---|---|
| | | | ಖುಷ್ಕಿ ಎ.ಗುಂ | ಜುಮ್ಲಾ ಎ.ಗುಂ. | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ಎಕರೆ-ಗುಂಟೆ |
| 1. | 87-2 *** | ಶಂಕರಯ್ಯ ಬಿನ್ ಜವರಯ್ಯ, ನಂ.446, 11ನೇ ಕ್ರಾಸ್, ಕಟ್ಟೆ ಬಳಿ ಕ್ಯಾತಮಾರನಹಳ್ಳಿ ಮೈಸೂರು ಮಹಮ್ಮದ್ ಉಮೇರ್ ಮದಿನಿ ಬಿನ್ ಎಂ. ಹಬೀಬ್ ಮದನಿ, ನಂ. ಎಂ.ಐ.ಜಿ-2, ಕೆ.ಹೆಚ್.ಬಿ ಕಾಲೋನಿ, ಕಲ್ಯಾಣಗಿರಿನಗರ, ಮೈಸೂರು-19 | 2.22 | 2.22 | 2.56 | ದೇವನೂರು ಗಡಿ | ಸ.ನಂ. 84 ಮತ್ತು 87/1 | ಸ.ನಂ. 87/1 | ಮೈಸೂರು ಮಹಾದೇವ ಪುರ ರಸ್ತೆ | 2.22 |

***ಘನ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 34808/04 (ಎಲ್‌ಕ್ಯೂ) ರಲ್ಲಿ ನೀಡಿರುವ ತಡೆಯಾಜ್ಞೆಯನ್ವಯ ಶ್ರೀ ಮಹಮ್ಮದ್ ಉಮರ್ ಮದಾನಿ ಇವರಿಗೆ ಸೇರಿದ ಸ.ನಂ. 87/2 ರಲ್ಲಿ 21 ಗುಂಟೆ ಜಮೀನನ್ನು ಹೊರತುಪಡಿಸಿ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.282 **ವಿ. ಶ್ರೀಧರಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ಅಬಕಾರಿ ಇಲಾಖೆ

### ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ರವರ ಕಛೇರಿ, ಕೊಡಗು ಜಿಲ್ಲೆ, ಮಡಿಕೇರಿ

### ಪ್ರಕಟಣೆ

### ನಂ:ಇಎಕ್ಸ್‌ಇ:3:ಡಿಟಿಸಿಆರ್‌ಎಂ:205:2003-04 ದಿನಾಂಕ: 14ನೇ ಫೆಬ್ರವರಿ 2005

**ವಿಷಯ :** ಕೊಡಗು ಜಿಲ್ಲೆಯಲ್ಲಿನ ಅಬಕಾರಿ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನಗಳ ವಿಲೇವಾರಿ ಬಗ್ಗೆ.

**ಉಲ್ಲೇಖ :** ಮುಟ್ಟುಗೋಲು ಹಾಕಿಕೊಳ್ಳಬೇಕಾದ ವಾಹನ ಸಂಖ್ಯೆ: ಅಂಬಾಸಿಡರ್ ಕಾರ್ ಕೆಎ-25-360

ಉಲ್ಲೇಖದಲ್ಲಿ ಹೇಳಲಾದ ವಾಹನ ಕೊಡಗು ಜಿಲ್ಲೆಯಲ್ಲಿ ಸರ್ಕಾರದ ಪರವಾನಿಗೆ ಇಲ್ಲದೆ ಹಾಗೂ ಕಾನೂನಿಗೆ ವಿರೋಧವಾಗಿ ಅಕ್ರಮ ಸಾರಾಯಿ, ಮದ್ಯಸಾರ, ಸ್ವದೇಶಿ ಮದ್ಯಗಳನ್ನು ಸಾಗಾಣಿಕೆ ಮಾಡುತ್ತಿರುವಾಗ ಈ ಕೆಳಕಂಡ ವಾಹನದ ಮೇಲೆ ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ.

ಆರಕ್ಷಕ ವೃತ್ತ ನಿರೀಕ್ಷಕರು, ಗೋಣಿಕೊಪ್ಪ ಠಾಣೆ ರವರ ಮೊಕದ್ದಮೆ ಸಂ: 105/2000 ರಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರ್ ಕೆಎ-25-360

ಸದರಿ ವಾಹನದ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲು ಈ ಪ್ರಾಧಿಕಾರದಲ್ಲಿ ಅಬಕಾರಿ ಕಾಯಿದೆ 1965ರ ಕಲಂ 43 (ಎ) ಅಡಿಯಲ್ಲಿ ವಿಚಾರಣೆ ನಡೆಸಲು ಸಂಬಂಧಪಟ್ಟ ವಾಹನದ ಮಾಲೀಕರ ಮಾಹಿತಿ ಬೇಕಾಗಿರುತ್ತದೆ. ಈವರೆಗೆ ಸಂಬಂಧಪಟ್ಟವರು ಈ ಪ್ರಾಧಿಕಾರಕ್ಕೆ ಬಂದು ಅರ್ಜಿ ಸಲ್ಲಿಸಿರುವುದಿಲ್ಲ ಹಾಗೂ ಸದರಿ ವಾಹನಗಳ "ಬಿ" ಎಕ್ಸ್ಟ್ರ್ಯಾಕ್ಟ್ ದೊರೆಯುತ್ತಿಲ್ಲ.

ಆದುದರಿಂದ ಸದರಿ ವಾಹನದ ಮಾಲೀಕರು ಈ ಪ್ರಕಟಣೆ ಹೊರಡಿಸಿದ 15 ದಿವಸಗಳೊಳಗೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಮೊಕದ್ದಮೆಯನ್ನು ನಡೆಸಲು ಸೂಚಿಸದೆ ಇಲ್ಲದ ಪಕ್ಷದಲ್ಲಿ ಯಾವುದೇ ಸೂಚನೆ ನೀಡದೆ ಅಬಕಾರಿ ಕಾಯಿದೆ 1965ರ ಕಲಂ 43 (ಎ) ಪ್ರಕಾರ ನೇರವಾಗಿ ಸದರಿ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ತಮ್ಮ ವಿಶ್ವಾಸಿ

ಪಿ.ಆರ್.283

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಕೊಡಗು ಜಿಲ್ಲೆ, ಮಡಿಕೇರಿ.

## ಅಬಕಾರಿ ಇಲಾಖೆ

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ರವರ ಕಛೇರಿ, ಕೊಡಗು ಜಿಲ್ಲೆ, ಮಡಿಕೇರಿ

## ಪ್ರಕಟಣೆ

**ನಂ:ಇಎಕ್ಸ್‌ಇ:3:ಡಿಟಿಸಿಆರ್‌ಎಂ:19:2000-01 ದಿನಾಂಕ: 14ನೇ ಫೆಬ್ರವರಿ 2005**

**ವಿಷಯ :** ಕೊಡಗು ಜಿಲ್ಲೆಯಲ್ಲಿನ ಅಬಕಾರಿ ಪ್ರಕರಣದಲ್ಲಿ ವಶಪಡಿಸಿಕೊಂಡ ಮೂರು ವಾಹನಗಳ ವಿಲೇವಾರಿ ಬಗ್ಗೆ.

**ಉಲ್ಲೇಖ :** ಮುಟ್ಟುಗೋಲು ಹಾಕಿಕೊಳ್ಳಬೇಕಾದ ವಾಹನ ಸಂಖ್ಯೆ:

1. ಜೀಪು ನಂ. ಕೆಎ.14-ಎಂ-1363
2. ಆಟೋರಿಕ್ಷಾ ನಂ. ಕೆಎ-12-5026
3. ಆಟೋರಿಕ್ಷಾ ನಂ. ಕೆಎ-12-2875
4. ಆಟೋರಿಕ್ಷಾ ನಂ. ಕೆಎ-12-1752

ಉಲ್ಲೇಖದಲ್ಲಿ ಹೇಳಲಾದ ವಾಹನಗಳು ಕೊಡಗು ಜಿಲ್ಲೆಯಲ್ಲಿ ಸರ್ಕಾರದ ಪರವಾನಿಗೆ ಇಲ್ಲದೆ ಹಾಗೂ ಕಾನೂನಿಗೆ ವಿರೋಧವಾಗಿ ಅಕ್ರಮ ಸಾರಾಯಿ, ಮದ್ಯಸಾರ, ಸ್ವದೇಶಿ ಮದ್ಯಗಳನ್ನು ಸಾಗಾಣಿಕೆ ಮಾಡುತ್ತಿರುವಾಗ ಈ ಕೆಳಕಂಡ ಮೂರು ವಾಹನಗಳ ಮೇಲೆ ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ.

1. ಜೀಪು ನಂ. ಕೆಎ.14-ಎಂ-1363
2. ಆಟೋರಿಕ್ಷಾ ನಂ. ಕೆಎ-12-5026
3. ಆಟೋರಿಕ್ಷಾ ನಂ. ಕೆಎ-12-2875
4. ಆಟೋರಿಕ್ಷಾ ನಂ. ಕೆಎ-12-1752

ಸದರಿ ವಾಹನಗಳ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲು ಈ ಪ್ರಾಧಿಕಾರದಲ್ಲಿ ಅಬಕಾರಿ ಕಾಯಿದೆ 1965ರ ಕಲಂ 43 (ಎ) ಅಡಿಯಲ್ಲಿ ವಿಚಾರಣೆ ನಡೆಸಲು ಸಂಬಂಧಪಟ್ಟ ವಾಹನದ ಮಾಲೀಕರುಗಳಿಗೆ ಅವಕಾಶ ನೀಡಲು ಹಲವಾರು ಬಾರಿ ಸಮನ್ಸ್ ನೀಡಿದರೂ ಸಹ ನೋಂದಣಿಯಾದ ಪತ್ರಗಳು ಈ ಕಛೇರಿಗೆ ವಾಪಸ್ ಬಂದಿರುತ್ತದೆ. ಹಾಗೂ ವಾಹನದ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ.

ಆದುದರಿಂದ ಸದರಿ ವಾಹನದ ಮಾಲೀಕರು ಈ ಪ್ರಕಟಣೆ ಹೊರಡಿಸಿದ 15 ದಿವಸಗಳೊಳಗೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಮೊಕದ್ದಮೆಯನ್ನು ನಡೆಸಲು ಸೂಚಿಸದೆ ಇಲ್ಲದ ಪಕ್ಷದಲ್ಲಿ ಯಾವುದೇ ಸೂಚನೆ ನೀಡದೆ ಅಬಕಾರಿ ಕಾಯಿದೆ 1965ರ ಕಲಂ 43 (ಎ) ಪ್ರಕಾರ ನೇರವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ತಮ್ಮ ವಿಶ್ವಾಸಿ

ಪಿ.ಆರ್.284

ಮಹಮ್ಮದ್ ಇಲಿಯಾಸ್ ಅಹಮದ್
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಕೊಡಗು ಜಿಲ್ಲೆ, ಮಡಿಕೇರಿ.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರ ನಡವಳಿಗಳು

**ಸಂಖ್ಯೆ:ಜಿಆರ್‌ಬಿ:ಎಲ್‌ಕ್ಯೂಡಿ:23:ಎಲ್‌ಎಂಸಿ:2003-04 ದಿನಾಂಕ: 29ನೇ ಜನವರಿ 2005**

**ವಿಷಯ :** ಸಮಾಪನೆಯಲ್ಲಿರುವ ಶಿವಮೊಗ್ಗ ತಾಲ್ಲೂಕು ಚಿನ್ನಬೆಳ್ಳಿ ಕುಶಲ ಕೆಲಸಗಾರರ ಸಹಕಾರ ಸಂಘ (ನಿ), ಶಿವಮೊಗ್ಗ ಇವರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ :**

1. ಬೆಂಗಳೂರು ವಿಭಾಗೀಯ ಜಂಟಿ ನಿಬಂಧಕರ ಆದೇಶ ಸಂಖ್ಯೆ: ಜಿಆರ್‌ಬಿ:ಎಲ್‌ಕ್ಯೂಡಿ:24:92-93, ದಿನಾಂಕ: 21.05.1983.
2. ಸಹಕಾರ ಸಂಘಗಳ ನಿಬಂಧಕರ ಆದೇಶ ಸಂಖ್ಯೆ: ಆರ್‌ಸಿಎಸ್:ಎಲ್‌ಕ್ಯೂಡಿ: 47:03-04, ದಿನಾಂಕ: 17.12.04.
3. ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಇವರ ಪ್ರಸ್ತಾವೆ ಸಂಖ್ಯೆ: ಡಿಆರ್‌ಎಸ್: ಸಮಾಪನೆ: ಡಿಎಲ್‌ಎಸ್: 109:01-02, ದಿನಾಂಕ: 17.1.2005.

**ಪ್ರಸ್ತಾವನೆ:**

ಶಿವಮೊಗ್ಗ ತಾಲ್ಲೂಕು ಚಿನ್ನಬೆಳ್ಳಿ ಕುಶಲ ಕೆಲಸಗಾರರ ಸಹಕಾರ ಸಂಘ (ನಿ) ಶಿವಮೊಗ್ಗ ಈ ಸಹಕಾರ ಸಂಘವು ನೋಂದಣಿ ಸಂಖ್ಯೆ: ಜಿಆರ್‌ಬಿ: 3389: ದಿನಾಂಕ: 18.02.1964 ರನ್ವಯ ನೋಂದಣಿಯಾಗಿದ್ದು, ಉಲ್ಲೇಖ (1)ರ ಆದೇಶದನ್ವಯ ಸಮಾಪನೆಗೊಂಡಿರುತ್ತದೆ. ಪ್ರಾರಂಭದಲ್ಲಿ ಸಮಾಪನಾಧಿಕಾರಿಯಾಗಿ ನೇಮಕಗೊಂಡ ಸಹಕಾರ ವಿಸ್ತರಣಾಧಿಕಾರಿ, ಶಿವಮೊಗ್ಗ ಇವರು ದಿನಾಂಕ: 15.07.1983 ರಲ್ಲಿ ಸಂಘದ ಪ್ರಭಾರ ಪಡೆದಿದ್ದು, ನಂತರ ಸಮಾಪನಾಧಿಕಾರಿಯಾಗಿ ನೇಮಕಗೊಂಡ ಮಾರಾಟಾಧಿಕಾರಿ, 1ನೇ ವೃತ್ತ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಕಛೇರಿ, ಶಿವಮೊಗ್ಗ ಇವರು ದಿನಾಂಕ: 24.05.1987 ರಲ್ಲಿ ಪ್ರಭಾರ ವಹಿಸಿಕೊಂಡಿರುತ್ತಾರೆ.

ಸಂಘದ ಪ್ರಭಾರ ವಹಿಸಿಕೊಂಡಿರುವ ಸಮಾಪನಾಧಿಕಾರಿಯು ಸಂಘದ ಆಸ್ತಿ-ಜವಾಬ್ದಾರಿಗಳನ್ನು ವಿಲೆಗೊಳಿಸಲು ಆದ್ಯತಾ ಪಟ್ಟಿಯನ್ನು ತಯಾರಿಸಿದ್ದು, ದಿನಾಂಕ: 11.12.1997 ರಲ್ಲಿ ಬೆಂಗಳೂರು ವಿಭಾಗೀಯ ಜಂಟಿ ನಿಬಂಧಕರ ಅನುಮೋದನೆ ಪಡೆದಿರುತ್ತಾರೆ.

ಸಂಘದಲ್ಲಿ ಲಭ್ಯವಿದ್ದ ದಾಖಲೆಗಳನ್ನಾಧರಿಸಿ ದಿನಾಂಕ: 31.03.2002 ರವರೆಗೆ ಸಂಘದ ಲೆಕ್ಕಪರಿಶೋಧನೆ ನಡೆಸಲಾಗಿದೆ. ಅದರಂತೆ ಸಂಘದಲ್ಲಿ ಸರ್ಕಾರದ ಬಂಡವಾಳ ಸಾಲ ರೂ. 15000-00 ಗಳನ್ನು ಮರುಪಾವತಿಸಲು ಬಾಕಿಯಿದ್ದು, ಸಂಘದ ಶಿವಮೊಗ್ಗ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಖಾತೆಯಲ್ಲಿ ಹೊಂದಿದ್ದ ಶಿಲ್ಕು ಮೊತ್ತ ರೂ.11,500-00 ಗಳನ್ನು ಪಡೆದು ಚಲನ್ ಸಂಖ್ಯೆ: 38 ರಲ್ಲಿ ದಿನಾಂಕ: 26.02.2002 ರಂದು ಸರ್ಕಾರಕ್ಕೆ ಮರುಪಾವತಿ ಮಾಡಿದ್ದು, ನಂತರ ಉಳಿದ ಮೊತ್ತ ರೂ. 3,500-00 ನ್ನು ಮರುಪಾವತಿಸಲು ರಹವಿಲ್ಲದ ಕಾರಣ ಮನ್ನ ಮಾಡುವಂತೆ ಕೋರಿ ಉಪನಿಬಂಧಕರ ಮುಖಾಂತರ ಪ್ರಸ್ತಾವೆ ಸಲ್ಲಿತವಾಗಿದ್ದು, ಈ ಮೊತ್ತವು ಉಲ್ಲೇಖ (2)ರ ಆದೇಶದನ್ವಯ ಮನ್ನಾ ಆಗಿರುತ್ತದೆ.

ಸಂಘವು ಕೈಗಾರಿಕಾ ಸಹಕಾರ ಬ್ಯಾಂಕಿಗೆ ಪಾವತಿಸಬೇಕಾದ ಸಾಲ ರೂ. 38,100-84 ಹಾಗೂ ಬಡ್ಡಿ ರೂ. 75,268-00 ಗಳು ಸರ್ಕಾರದ ಆದೇಶ ಸಂಖ್ಯೆ: ಸಿಐ-1: ಎಸ್‌ಬಿಎಂ:81:ಬೆಂಗಳೂರು ದಿನಾಂಕ: 27.06.1991 ರನ್ವಯ ಮನ್ನಾ ಆಗಿದ್ದು, ಈ ಮೊತ್ತವನ್ನು ಕೈಗಾರಿಕಾ ಸಹಕಾರ ಬ್ಯಾಂಕಿನ ಲೆಕ್ಕಗಳಿಗೆ ಹೊಂದಾಣಿಕೆ ಮಾಡಿಕೊಂಡು ಈ ಬಾಬ್ತನ್ನು ಶೂನ್ಯಗೊಳಿಸಲಾಗಿದೆ.

ಸಂಘದ ಉಳಿದ ಆಸ್ತಿಗಳನ್ನು ವಸೂಲು ಮಾಡಲು ಹಾಗೂ ಜವಾಬ್ದಾರಿಗಳನ್ನು ತೀರಿಸಲು ಯಾವುದೇ ರಹವಿಲ್ಲದ ಕಾರಣ ಸಂಘದ ಸಮಾಪನಾಧಿಕಾರಿಯವರು ದಿನಾಂಕ: 22.01.2001, 12.03.2001, 14.05.2001, 05.02.2002, 27.02.2002, 27.11.2003 ಹಾಗೂ 23.12.04 ರಂದು ನಡೆಸಿದ ನಡವಳಿಗಳ ಪ್ರಕಾರ ಶೂನ್ಯಗೊಳಿಸಲು ತೀರ್ಮಾನ ಕೈಗೊಂಡಿರುತ್ತಾರೆ.

ಸಂಘದ ಸಮಾಪನಾ ಪೂರ್ವದಲ್ಲಿ ಸಂಘದ ಮಾಜಿ ನೌಕರರುಗಳಿಂದ ರೂ. 15855-76ರ ಹಣ ದುರುಪಯೋಗವಾಗಿದ್ದು, ಇವರುಗಳ ವಿಳಾಸ ಪತ್ತೆಯಾಗದ ಕಾರಣ ಈ ಬಾಬ್ತನ್ನು ನಷ್ಟಕ್ಕೆ ವರ್ಗಾಯಿಸಲು ತೀರ್ಮಾನ ಕೈಗೊಂಡಿರುವ ಸಮಾಪನಾಧಿಕಾರಿಯು ಈ ಬಾಬ್ತನ್ನು ಶೂನ್ಯಗೊಳಿಸಿರುತ್ತಾರೆ. ಹಾಗೂ ನೋಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸಲು ದಿನಾಂಕ: 23.12.04 ರಲ್ಲಿ ತೀರ್ಮಾನಿಸಿದ್ದಾರೆ.

ಸಂಘದಲ್ಲಿ ಸರ್ಕಾರಿ ಸಾಲ ಮರುಪಾವತಿಗೆ ಬಾಕಿ ಉಳಿದಿಲ್ಲದ ಹಾಗೂ ಕೈಗಾರಿಕಾ ಬ್ಯಾಂಕಿನ ಸಾಲ ಪೂರ್ಣ ಮನ್ನಾ ಆಗಿರುವ ಕಾರಣ ಸಮಾಪನಾಧಿಕಾರಿಯ ತೀರ್ಮಾನದಂತೆ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಬೇಕೆಂದು ಉಲ್ಲೇಖ (3)ರಲ್ಲಿ ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಇವರು ಪ್ರಸ್ತಾವೆ ಸಲ್ಲಿಸಿ ಶಿಫಾರಸ್ಸು ಮಾಡಿದ್ದಾರೆ.

ಈ ಶಿಫಾರಸ್ಸನ್ನು ಆಧರಿಸಿ, ಪ್ರಸ್ತಾವೆಯನ್ನು ಪರಿಶೀಲಿಸಲಾಗಿದ್ದು, ಸಂಘದ ಸರ್ಕಾರದ ವಿನಿಯೋಗ ಮರುಪಾವತಿಗೆ ಬಾಕಿಯಿಲ್ಲದಿರುವುದು, ಕೈಗಾರಿಕಾ ಬ್ಯಾಂಕಿನ ಸಾಲ ಪೂರ್ಣ ಮನ್ನಾ ಆಗಿರುವುದು ಮತ್ತು ಸಂಘದ ಆಸ್ತಿಗಳನ್ನು ವಸೂಲು ಮಾಡಲು ಹಾಗೂ ಜವಾಬ್ದಾರಿಗಳನ್ನು ತೀರಿಸಲು ಯಾವುದೇ ರಹವಿಲ್ಲದಿರುವುದನ್ನು ಮನಗಂಡು, ಉಪನಿಬಂಧಕರ ಶಿಫಾರಸ್ಸಿನಂತೆ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಲಾಗಿದ್ದು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್‌ಎಂ:2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಶಿವಮೊಗ್ಗ ತಾಲ್ಲೂಕು ಚಿನ್ನಬೆಳ್ಳಿ ಕುಶಲ ಕೆಲಸಗಾರರ ಸಹಕಾರ ಸಂಘ (ನಿ), ಶಿವಮೊಗ್ಗ ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಜಿಆರ್‌ಬಿ:3389: ದಿನಾಂಕ: 18.02.1964 ನ್ನು ಈ ಕೂಡಲೇಯಿಂದ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದು ಕೊಂಡಿದೆಯೆಂದೂ, ಸಂಘದ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ನಿಂತುಹೋಗಿ ವಿಸರ್ಜಿತವಾಗಿದೆಯೆಂದೂ ಪರಿಗಣಿಸತಕ್ಕದ್ದು. ಈ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ 33 (ಒ) ಅನ್ವಯ ಈ ಆದೇಶದ ದಿನಾಂಕದಿಂದ 03 ವರ್ಷಗಳವರೆಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸಿ ನಂತರ ನಾಶಪಡಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: 29.01.2005 ರಂದು ಸ್ವಸಹಿ ಹಾಗೂ ಕಛೇರಿ ಮುದ್ರಾಂಕದೊಂದಿಗೆ ಹೊರಡಿಸಲಾಗಿದೆ.

**ಬಸವೇಗೌಡ**

ಪಿ.ಆರ್.285

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

## ಕಾರ್ಮಿಕ ಅಧಿಕಾರಿ, ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ಮಂಡ್ಯ ಉಪವಿಭಾಗ-2, ಮಂಡ್ಯ

## ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ-10:2005

**ಅರ್ಜಿದಾರರು:**

1. ಪುಟ್ಟಸಿದ್ದಯ್ಯ ಬಿನ್ ಮಲ್ಲಯ್ಯ
2. ಶ್ರೀಮತಿ ಭಾಗ್ಯಮ್ಮ ಕೋಂ ಪುಟ್ಟಸಿದ್ದಯ್ಯ
   ವಾಸ: ಹೆಮ್ಮಿಗೆ ವಿಲೇಜ್ ಕೊತ್ತತ್ತಿ ಹೋಬಳಿ
   ಮಂಡ್ಯ ತಾ:

**ವಿರುದ್ಧ**

**ಪ್ರತಿವಾದಿಗಳು:**

1. ಮಿ. ಬಿ. ಎಂ. ಜಗದೀಶ್ ಬಿನ್ ಬಿ. ತಿಮ್ಮೇಗೌಡ
   ನಂ.1871/9 ಮಾದುರ್ಯ ಕಾಲೋನಿ ಸುಭಾಷ್‌ನಗರ ಮಂಡ್ಯ
2. ಬ್ರಾಂಚ್ ಮ್ಯಾನೇಜರ್ ನ್ಯಾಷನಲ್ ಇನ್ಷೂರೆನ್ಸ್ ಕಂ.ಲಿ.,
   ನಂ. 54 ವಿ.ವಿ. ರಸ್ತೆ, ಮಂಡ್ಯ.

**ಅಧಿಸೂಚನೆ**

ಅರ್ಜಿದಾರರಾದ ಪುಟ್ಟಸಿದ್ದಯ್ಯ ಭಾಗ್ಯಮ್ಮ ಅವರು ತಮ್ಮ ಮಗನು ಒಂದನೇ ಪ್ರತಿವಾದಿ ಶ್ರೀ: ಬಿ. ಎಂ. ಜಗದೀಶ್ ರವರ ಬಳಿ ಕ್ಲೀನರ್: ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 18.12.04 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆ ಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ: ತಕರಾರು ಅರ್ಜಿಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 2.2.2005 ರಂದು ನೀಡಲಾಗಿದೆ.

ಕಾರ್ಮಿಕ ಅಧಿಕಾರಿ, ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ಮಂಡ್ಯ
ಉಪವಿಭಾಗ-2, ಮಂಡ್ಯ-571401.

ಪಿ.ಆರ್.286

**ಕಾರ್ಮಿಕ ಅಧಿಕಾರಿ, ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ಮಂಡ್ಯ ಉಪವಿಭಾಗ-2, ಮಂಡ್ಯ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ-11:2005**

**ಅರ್ಜಿದಾರರು:**

1. ನಿಂಗಮ್ಮ ಕೋಂ ಲೇಟ್ ತಮ್ಮಯ್ಯ ಗರಕಹಳ್ಳಿ ಗ್ರಾಮ ವಿರೂಪಾಕ್ಷಪುರ ಹೋಬಳಿ
2. ಸಿದ್ದಪ್ಪ ಬಿನ್ ಲೇಟ್ ತಮ್ಮಯ್ಯ
3. ಪ್ರಕಾಶ ಬಿನ್ ಲೇಟ್ ತಮ್ಮಯ್ಯ
   ವಾಸ: ಹಲಗೂರು ರಸ್ತೆ

**ವಿರುದ್ಧ**

**ಪ್ರತಿವಾದಿಗಳು:**

1. ರಮೇಶ್ ಬಿನ್ ಸಿದ್ದೇಗೌಡ ಗರಕಹಳ್ಳಿ ಗ್ರಾಮ ವಿರೂಪಾಕ್ಷಪುರ ಹೋಬಳಿ ಚೆನ್ನಪಟ್ಟಣ ತಾಲ್ಲೂಕು ಬೆಂಗಳೂರು ಗ್ರಾಮಾಂತರ ಜಿಲ್ಲೆ.
2. ದಿ. ಬ್ರಾಂಚ್ ಮ್ಯಾನೇಜರ್ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. 2ನೇ ಅಡ್ಡರಸ್ತೆ, ಅಶೋಕನಗರ ಮಂಡ್ಯ ನಗರ.

**ಅಧಿಸೂಚನೆ**

ಅರ್ಜಿದಾರರಾದ ನಿಂಗಮ್ಮ ಸಿದ್ದಪ್ಪ ಅವರು ತಮ್ಮ ಗಂಡ:ಮಗನಾದ ಶ್ರೀ ತಮ್ಮಯ್ಯ ಅವರು ಒಂದನೇ ಪ್ರತಿವಾದಿ ಶ್ರೀ:ಶ್ರೀಮತಿ ರಮೇಶ್ ಬಿನ್ ಸಿದ್ದೇಗೌಡ ರವರ ಬಳಿ ಚಾಲಕ: ಕ್ಲೀನರ್: ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 11.12.2004 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿದ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 02.02.05 ರಂದು ನೀಡಲಾಗಿದೆ.

ಕಾರ್ಮಿಕ ಅಧಿಕಾರಿ, ಹಾಗೂ ಕಾರ್ಮಿಕ,
ಪರಿಹಾರ ಆಯುಕ್ತರು, ಮಂಡ್ಯ ಉಪವಿಭಾಗ-2, ಮಂಡ್ಯ-571401.

ಪಿ.ಆರ್.287

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ, ಸಾಗರ**

**ಪ್ರಕಟಣೆ**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಶ್ರೀಗಂಧ ಅಕ್ರಮ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಇಲಾಖಾಪುರ ವಶಪಡಿಸಿಕೊಂಡ ವಾಹನ 407 ಮಿನಿಲಾರಿ ಕೆಎ-20-2637ರ ಆರ್.ಸಿ. ಫೋನರ್ ಆದ ಶ್ರೀ ಎನ್. ಗೋವಿಂದನಾಯಕ್ ಬಿನ್ ವಾಮನ್ ನಾಯಕ್ ಅಂಬಾನಿ ನಿಲಯ, ನೇರಳಗಟ್ಟಿ ಗ್ರಾಮ, ಕುಂದಾಪುರ ಅಂಚೆ ಕುಂದಾಪುರ ತಾಲ್ಲೂಕು ಉಡುಪಿ ಜಿಲ್ಲೆ ಇವರು ಮೃತರಾಗಿರುವುದರಿಂದ ಈ ವಾಹನದ ಬಗ್ಗೆ ಮೃತರ ವಾರಸುದಾರರೆಂದು ಶ್ರೀ ವಾಮನ್ ನಾಯಕ್ ಅಂಬಾನಿ ನಿಲಯ, ನೇರಳಗಟ್ಟಿ ಗ್ರಾಮ, ಕುಂದಾಪುರ ಅಂಚೆ ಕುಂದಾಪುರ ತಾಲ್ಲೂಕು ಉಡುಪಿ ಜಿಲ್ಲೆ ಇವರು ಈ ನ್ಯಾಯಾಲಯಕ್ಕೆ ಕ್ಲೈಮ್ ಅರ್ಜಿಸಲ್ಲಿಸಿ ವಾಹನ ಮಧ್ಯಂತರ ಅವಧಿಗೆ ಬಿಡಲು ಕೋರಿರುತ್ತಾರೆ. ಈ ವಾಹನದ ಬಗ್ಗೆ ಇವರ ಅರ್ಜಿ ಮೇಲೆ ತಕರಾರು ಇದ್ದಲ್ಲಿ ಹಾಗೂ ಈ ವಾಹನದ ಬಗ್ಗೆ ಕ್ಲೈಮ್ ಹಾಕಲು ಯಾರಾದರು ಇದ್ದಲ್ಲಿ ಸೂಕ್ತ ದಾಖಲೆಗಳೊಂದಿಗೆ ಈ ನ್ಯಾಯಾಲಯಕ್ಕೆ ಈ ಪ್ರಕಟಣೆ ಹೊರಡಿಸಿ 15 ದಿನದೊಳಗೆ ಹಾಜರಾಗಿ ಸಲ್ಲಿಸುವುದು.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.288

**COMMERCIAL TAXES DEPARTMENT**

**Office of the Commercial Tax Officer, 3rd Circle, B'lore,**

**NOTIFICATION**

**No....... 2004-05 Bangalore dated: 11th February 2005**

It is hereby brought to the notice of the general public that the statutory forms/declaration form issued to the dealer noticed below, is treated as invalid due to non availability of the concerned assessee after obtaining the registration from this office. Any persons attempt to use the following statutory forms/ declaration form are themselves responsible for its further consequences.

| Sl.No. | Name & address of the assessee with R.C.No. | Date of issue | Sl.No. of declaration forms | Total No. of forms invalid |
|---|---|---|---|---|
| 1. | Sri. Chennaram, Prop.,<br>M/s. Parameshwari Chemicals No.15,<br>Rukmaji Lane, Balepet cross, B'lore-53.<br>R. C. No. KST 75726117<br>CST 75776110 | 31.3.1998 | 'C' Form<br>040904<br>040906<br>040907 | 03 |

**H. P. GOPAL**

PR-289 Commercial Tax Officer, 3rd Circle, Bangalore.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ನಿಯಮ 441 ರನ್ವಯ ವಸೂಲಾಧಿಕಾರಿ, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು-4 ಇವರ ನಡವಳಿಕೆಗಳು

**ಸನಿವ:ಯಾ.ಸ್ಥಿರೀಕರಣ:04-05/476/8354 ದಿನಾಂಕ: 1ನೇ ಫೆಬ್ರವರಿ 2005**

**ವಿಷಯ :** ಶ್ರೀ ಎಸ್. ಎಂ. ವೀರಭದ್ರಯ್ಯ, ಬಿನ್ ಗವಿಸಿದ್ದಯ್ಯ, ಡೋರ್ ನಂ. 34 ವಾರ್ಡ್ ನಂ. 9, ಲಾಲ್ ಕಮಾನ್, ಬ್ರೂಸ್‌ಪೇಟೆ, ಬಳ್ಳಾರಿ ಮತ್ತು ಇತರರು, ಸಿ.ಇ.ಪಿ. ನಂ.24/2001-02 ಇವರ ಸ್ಥಿರಾಸ್ತಿಯ ಮಾರಾಟದ ಸ್ಥಿರೀಕರಣದ ಬಗ್ಗೆ.

**ಉಲ್ಲೇಖ :** ಮಾರಾಟಾಧಿಕಾರಿಗಳು, ಬಳ್ಳಾರಿ ಶಾಖೆ ಇವರ ಪತ್ರ ಕ್ರ.ಸಂ. ಕೆಆರ್‌ಕೆ:ಬಿಎಲ್‌ವೈ:1618:2004-05 ದಿನಾಂಕ: 30.12.2004.

**ಪ್ರಸ್ತಾವನೆ:**

ಶ್ರೀ ಎಸ್. ಎಂ. ವೀರಭದ್ರಯ್ಯ, ಬಿನ್ ಗವಿಸಿದ್ದಯ್ಯ ಡೋರ್ ನಂ. 34, ವಾರ್ಡ್ ನಂ. 9, ಲಾಲ್ ಕಮಾನ್, ಬ್ರೂಸ್‌ಪೇಟೆ, ಬಳ್ಳಾರಿ ಮತ್ತು ಇತರರು, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿ., ಬಳ್ಳಾರಿ ಶಾಖೆಯಿಂದ ಸಾಲ ಪಡೆದು ಸಕಾಲದಲ್ಲಿ ಅಸಲು ಮತ್ತು ಬಡ್ಡಿಯನ್ನು ಮರುಪಾವತಿಸದ ಕಾರಣ ಸುಸ್ತಿಯಾಗಿದ್ದು ಸದರಿ ಸುಸ್ತಿದಾರರ ಮೇಲೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯಡಿ ಸಂಬಂಧಪಟ್ಟ ಅಧಿಕಾರಿಗಳ ನ್ಯಾಯಾಲಯದಲ್ಲಿ ದಾವೆ ಹೂಡಿ ಸುಸ್ತಿಸಾಲ ವಸೂಲಾತಿಗಾಗಿ ಸದರಿಯವರ ವಿರುದ್ಧ ದಿನಾಂಕ: 8.8.2001 ರಂದು ಅವಾರ್ಡ್ ನಂ.ಎ (ಐ.ಎಂ) ಡಿ7/2176/2000-01 ರೀತ್ಯ ಡಿಕ್ರಿ ಪಡೆದಿರುತ್ತಾರೆ. ಡಿಕ್ರಿಯಾದ ನಂತರವು ಬಾಕಿದಾರರು ಸಾಲ ಮರುಪಾವತಿ ಮಾಡದ ಕಾರಣ ಡಿಕ್ರಿದಾರ ಬ್ಯಾಂಕ್ ಸದರಿಯವರ ವಿರುದ್ಧ ಸಿ.ಇ.ಪಿ. ನಂ.24/2001-02 ರಂತೆ ಅಮಲ್ಜಾರಿ ಆದೇಶ ಪಡೆದು ಅಮಲ್ಜಾರಿ ಕಡತವನ್ನು ಸಹಕಾರ ಸಂಘಗಳ ಕಾಯ್ದೆಯನ್ವಯ ಮುಂದಿನ ಕ್ರಮಕ್ಕಾಗಿ ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ವಹಿಸಿಕೊಡಲಾಗಿತ್ತು. ಸದರಿ ಮಾರಾಟಾಧಿಕಾರಿಗಳು ಅಮಲ್ಜಾರಿ ಪ್ರಕರಣದ ವಿಲೇವಾರಿ ಮತ್ತು ಸುಸ್ತಿಸಾಲ ವಸೂಲಾತಿಗಾಗಿ ಸುಸ್ತಿದಾರರಿಗೆ ಸೇರಿದ ಆದೇಶದಡಿಯಿರುವ ಷೆಡ್ಯೂಲ್ ಸ್ಥಿರಾಸ್ತಿಯನ್ನು ಅಂತಿಮವಾಗಿ ದಿನಾಂಕ: 24.11.2004 ರಂದು ಬಹಿರಂಗ ಹರಾಜಿಗೆ ಒಳಪಡಿಸಿದ್ದು ಅಂದು ನಡೆದ ಹರಾಜಿನಲ್ಲಿ ಭಾಗವಹಿಸಿದವರ ಪೈಕಿ ಶ್ರೀ ಜಿ. ಎಸ್. ಪೃಥ್ವಿನಾಥ್, ಬಿನ್ ಶ್ರೀ ಗುರುರಾಜ ರಾವ್, ಡೋರ್ ನಂ. 42ಎ, ವಾರ್ಡ್ ನಂ. 5 ವೈ.ಎಸ್.ಎ. ಲೇನ್, ಲಾಲ್‌ಕಮಾನ್ ಬಳ್ಳಾರಿ, ಇವರು ಅತಿ ಹೆಚ್ಚಿನ ಮೊತ್ತ ರೂ.3,85.000/-ಕ್ಕೆ (ಮೂರು ಲಕ್ಷದ ಎಂಭತ್ತೈದು ಸಾವಿರ ರೂಪಾಯಿಗಳು ಮಾತ್ರ) ಬಿಡ್ ಮಾಡಿರುತ್ತಾರೆ. ಮಾರಾಟಾಧಿಕಾರಿಗಳು, ಬಳ್ಳಾರಿ ಶಾಖೆ ಬಿಡ್‌ನ್ನು ಶ್ರೀ ಜಿ. ಎಸ್. ಪೃಥ್ವಿನಾಥ, ಬಿನ್ ಶ್ರೀ ಗುರುರಾಜ ರಾವ್, ಡೋರ್ ನಂ. 42ಎ, ವಾರ್ಡ್ ನಂ. 5, ವೈ.ಎಸ್.ಎ. ಲೇನ್, ಲಾಲ್‌ಕಮಾನ್, ಬಳ್ಳಾರಿ, ರವರ ಹೆಸರಿಗೆ ನಿಲ್ಲಿಸಿ ಮುಂದಿನ ಕ್ರಮಕ್ಕಾಗಿ ಹರಾಜಿನ ದಾಖಲೆಗಳನ್ನು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಸದರಿ ದಾಖಲೆಗಳನ್ನು ಪರಿಶೀಲಿಸಿದಾಗ, ಮಾರಾಟದ ನಡವಳಿಕೆಗಳು ಕರ್ನಾಟಕ ಸಹಕಾರ ಸಂಘಗಳ ನಿಯಮ 1960 ರನ್ವಯ ನಿಯಮ 38 (2) (ಡಿ)ರ ಪ್ರಕಾರ ಕ್ರಮ ಜರುಗಿಸಲಾಗಿದ್ದು, ನಿಯಮ 38 (6) (ಎ) ಅನ್ವಯ ಕ್ರಮ ತೆಗೆದುಕೊಳ್ಳಬೇಕಾಗಿರುವುದರಿಂದ ಈ ಕೆಳಕಂಡ ಆದೇಶ ಮಾಡಲಾಗಿದೆ.

## ಆದೇಶ

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38(6)(ಎ) ಅನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿ ನಿಯಮ 41, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು-4, ಆದ ನಾನು ಶ್ರೀ ಎಸ್. ಎಂ. ವೀರಭದ್ರಯ್ಯ ಬಿನ್ ಗವಿಸಿದ್ದಯ್ಯ ಇವರಿಗೆ ಸೇರಿದ ಈ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಯನ್ನು ಸದರಿ ಸ್ವತ್ತಿನ ಮುಂಭಾಗ ದಿನಾಂಕ: 24.11.2004 ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತಿಹೆಚ್ಚಿನ ಬಿಡ್ ಮೊತ್ತ ರೂ.3,85,000/-ಕ್ಕೆ (ಮೂರು ಲಕ್ಷದ ಎಂಭತ್ತೈದು ಸಾವಿರ ರೂಪಾಯಿಗಳು ಮಾತ್ರ)ಕ್ಕೆ ಬಿಡ್ ಮಾಡಿದ್ದ ಶ್ರೀ ಜಿ. ಎಸ್. ಪೃಥ್ವಿನಾಥ, ಬಿನ್ ಶ್ರೀ ಗುರುರಾಜ ರಾವ್, ಡೋರ್ ನಂ.42ಎ, ವಾರ್ಡ್ ನಂ. 5, ವೈ.ಎಸ್.ಎ. ಲೇನ್, ಲಾಲ್‌ಕಮಾನ್, ಬಳ್ಳಾರಿ, ಇವರ ಹೆಸರಿಗೆ ಈ ಕೂಡಲೇ ಜಾರಿಗೆ ಬರುವಂತೆ ಎಲ್ಲಾ ಹಕ್ಕು ಸ್ವಾಮ್ಯ ಪತ್ರಗಳನ್ನು ವರ್ಗಾವಣೆ ಮಾಡಿ ಮಾರಾಟ ಸ್ಥಿರೀಕರಣದ ಆದೇಶವನ್ನು ನೀಡಿರುತ್ತೇನೆ.

## ಷೆಡ್ಯೂಲ್ ಸ್ಥಿರಾಸ್ತಿಯ ವಿವರ

ವಾಸದ ಮನೆ ನಂ. 34, ವಾರ್ಡ್ ನಂ. 5 (ಬಿ. ನಂ.9, ಟಿ.ಎಸ್. ನಂ.765), ಅಸೆಸ್‌ಮೆಂಟ್ ನಂ.3857/3554) ಬ್ರೂಸ್ ಪೇಟೆ, ಲಾಲಕಮಾನ್, ಬಳ್ಳಾರಿ, ಬಳ್ಳಾರಿ ಜಿಲ್ಲೆ, ವಿಸ್ತೀರ್ಣ ಪೂರ್ವ ಪಶ್ಚಿಮ $12^{1}/_{2}$ ಅಡಿಗಳು, ಉತ್ತರ ದಕ್ಷಿಣ 39 ಅಡಿಗಳು, ಚಕ್ಕುಬಂದಿ

ಪೂರ್ವಕ್ಕೆ : ಟಿ.ಎಸ್.ನಂ. 766 ವೆಂಕಟೇಶಲು ರವರ ಮನೆ
ಪಶ್ಚಿಮಕ್ಕೆ : ಟಿ.ಎಸ್. ನಂ.764 ರಾಜು ರವರ ಮನೆ
ಉತ್ತರಕ್ಕೆ : ಟಿ.ಎಸ್. ನಂ.745/1 ರಸ್ತೆ, ಖಾಲಿ ಜಾಗ
ದಕ್ಷಿಣಕ್ಕೆ : ಟಿ.ಎಸ್.ನಂ.605

ಮೇಲ್ಕಂಡ ಸ್ಥಿರಾಸ್ಥಿಯ ವರ್ಗಾವಣೆಯನ್ನು ಸುಸ್ತಿದಾರರು ಪಾವತಿಸಬೇಕಾಗಿರುವ ಭಾಗಶಃ ಸಾಲ ವಸೂಲಿಗಾಗಿ ವರ್ಗಾವಣೆ ಮಾಡಲಾಗಿದೆ.

ಈ ಆದೇಶವನ್ನು ನನ್ನ ಸಹಿ ಮತ್ತು ಮೊಹರಿನೊಂದಿಗೆ ದಿನಾಂಕ: 01.02.2005 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿ,

ಪಿ.ಆರ್.290 ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ ಕೋಲಾರ ಜಿಲ್ಲೆ ಕೋಲಾರ

## ಅಧಿಸೂಚನೆ

### ನಂ:ಎಲ್‌ಆರ್‌ಎಫ್ (ಕಲಂ 109) ಸಿಆರ್:03:2004-05 ದಿನಾಂಕ: 11ನೇ ಫೆಬ್ರವರಿ 2005

ಕೋಲಾರ ತಾಲ್ಲೂಕು ಕಸಬಾ ಹೋಬಳಿ ಪೂವಾಂಡಹಳ್ಳಿ ಗ್ರಾಮದ ಸ.ನಂ. 88ರಲ್ಲಿ 1-33 $^{3}/_{4}$ ಎಕರೆ ಮತ್ತು 1-33 $^{3}/_{4}$ ಎಕರೆ ಈ ರೀತಿಯಾಗಿ ಒಟ್ಟು 3-27 $^{1}/_{2}$ ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ (ಇಂಜಿನೀಯರಿಂಗ್ ಕಾಲೇಜ್ ಸ್ಥಾಪನೆಗಾಗಿ) ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 (1) ರಡಿಯಲ್ಲಿ ಅನುಮತಿಯನ್ನು ನೀಡಲು ಕೋರಿ ಅಧ್ಯಕ್ಷರು ಸರ್.ಎಂ. ವಿಶ್ವೇಶ್ವರಯ್ಯ ಎಜುಕೇಷನ್ ಟ್ರಸ್ಟ್ (ರಿ) ಬೆಂಗಳೂರು ರವರು ನಮೂನೆ-15ಎ ರಲ್ಲಿ ಅರ್ಜಿಯನ್ನು ಸಲ್ಲಿಸಿ ತತ್ಸಂಬಂಧ ಹಾಜರುಪಡಿಸಿರುವ ದಾಖಲೆಗಳಿಗೆ ಸಂಬಂಧಿಸಿದಂತೆ ತಹಶೀಲ್ದಾರ್ ಕೋಲಾರ ತಾಲ್ಲೂಕು ರವರು ಪತ್ರದ ಸಂಖ್ಯೆ: ಎಲ್‌ಆರ್‌ಎಫ್:ಸಿಆರ್:39/2004-05 ದಿನಾಂಕ: 09.07.2004 ರಂತೆ ನಮೂನೆ 15ಎ ರಲ್ಲಿ ಚೆಕ್‌ಲಿಸ್ಟ್‌ನೊಂದಿಗೆ ಕಡತ ತಯಾರಿಸಿ ಸಲ್ಲಿಸಿರುವ ಮಾಹಿತಿಯನ್ನು ಅನುಸರಿಸಿ ಸಹಾಯಕ ಕಮೀಷನರ್ ಕೋಲಾರ ಉಪ ವಿಭಾಗ ರವರು ಪತ್ರ ಸಂ. ಎಲ್‌ಆರ್‌ಎಫ್: ಸಿಆರ್:5/2004-05 ದಿನಾಂಕ: 17.07.2004 ರಂತೆ ಪ್ರಸ್ತಾವನೆಯನ್ನು ಸಲ್ಲಿಸಿ ಅರ್ಜಿದಾರರಿಗೆ ಮೇಲ್ಕಂಡ ಜಮೀನುಗಳನ್ನು ಪ್ರಸ್ತಾಪಿತ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961ರ ಕಲಂ 109 (1) ರಂತೆ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿರುತ್ತೆ. ಪೂವಾಂಡಹಳ್ಳಿ ಗ್ರಾಮದ ಸ.ನಂ. 88ರ ಪೈಕಿ 1-33 $^{3}/_{4}$ ಎಕರೆ ಜಮೀನಿನ ಖಾತೆ ಸೈಯದ್ ಗನ್ನೀಸಾಬ್ ಬಿನ್ ಯಾಕೂಬ್ ಸಾಬ್ ರವರ ಹೆಸರಿನಲ್ಲಿಯೂ ಮತ್ತು ಸ.ನಂ. 88ರ ಪೈಕಿ 1-33$^{3}/_{4}$ ಎಕರೆ ಜಮೀನಿನ ಖಾತೆ ಶ್ರೀ ಅಬ್ದುಲ್ ಸತ್ತಾರ್ ಬಿನ್ ಅಬ್ದುಲ್ ಅಜೀಜ್ ಎಂಬುವರ ಹೆಸರಿನಲ್ಲಿಯೂ ಇರುತ್ತೆ. ಈ ಜಮೀನುಗಳನ್ನು ಮೇಲ್ಕಂಡ ಖಾತೆದಾರರು ಅರ್ಜಿದಾರರಿಗೆ ಕ್ರಯಕ್ಕೆ ನೀಡಲು ಒಪ್ಪಿ ಕ್ರಯದ ಕರಾರು ಪತ್ರಗಳನ್ನು ಬರೆಸಿಕೊಟ್ಟಿರುತ್ತಾರೆ. ಮೇಲ್ಕಂಡ ಜಮೀನುಗಳು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ಕಾಯ್ದೆ/ ನಿಯಮಗಳು: ಇನಾಂ ರದ್ದಿಯಾತಿ ಕಾಯ್ದೆ ಮತ್ತು ಪಿ.ಟಿ.ಸಿ.ಎಲ್. ಕಾಯ್ದೆಗಳ ವ್ಯಾಪ್ತಿಗೆ ಒಳಪಟ್ಟಿರುವುದಿಲ್ಲ. ಮೇಲ್ಕಂಡ ಜಮೀನುಗಳ ಬಗ್ಗೆ ಯಾರೂ ಗೇಣಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸರ್. ಎಂ. ವಿಶ್ವೇಶ್ವರಯ್ಯ ಎಜುಕೇಷನ್ ಟ್ರಸ್ಟ್ ಬೆಂಗಳೂರಿನ ಗಾಂಧಿನಗರ ಉಪ ನೋಂದಣಾಧಿಕಾರಿಗಳ ಕಛೇರಿಯಲ್ಲಿ ನಂ. 223/83-84 ದಿನಾಂಕ: 14.10.1983 ರಂತೆ ನೋಂದಣಿಯಾಗಿರುತ್ತೆ. ಕುಲಸಚಿವರು ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ ಬೆಳಗಾಂ ರವರ ಸಂಖ್ಯೆ ವಿತಾವಿ. ವಿಮುಂ 2004-05 ಎ-1/10654 ದಿನಾಂಕ 31.3.2004ರ ಅಧಿಸೂಚನೆಯಂತೆ Computer Science and Engineering, Information Science & Engineering, ಮತ್ತು Electronics & Communication Engineering ವಿಷಯಗಳಲ್ಲಿ 3 ಮತ್ತು 4ನೇ ವರ್ಷದ ಪದವಿ ಕೋರ್ಸನ್ನು 2004-05ನೇ ಶೈಕ್ಷಣಿಕ ವರ್ಷದಿಂದ ನಡೆಸಲು ಅರ್ಜಿದಾರರಿಗೆ ಸಂಯೋಜನಾ ಮಂಜೂರಾತಿ ನೀಡಿರುತ್ತೆ. ಪ್ರಸ್ತಾಪಿತ ಜಮೀನುಗಳನ್ನು ದಿನಾಂಕ: 29.1.2005 ರಂದು ಸ್ಥಳ ತನಿಖೆ ಮಾಡಿರುತ್ತೆ. ಸದರಿ ಜಮೀನುಗಳು ಶೈಕ್ಷಣಿಕ ಸಂಸ್ಥೆಯನ್ನು ನಡೆಸಲು ಸೂಕ್ತವಾಗಿರುತ್ತೆ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರಂತೆ (I) (II) ರಂತೆ ಶೈಕ್ಷಣಿಕ ಉದ್ದೇಶಕ್ಕಾಗಿ 4 ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಹೊಂದಲು ಅವಕಾಶವನ್ನು ಕಲ್ಪಿಸಿದ್ದು ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ; 23.04.2003 ರಂತೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(I) ಕ್ಕೆ ತಿದ್ದುಪಡಿಯನ್ನು ತಂದಿರುತ್ತೆ. (ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯ್ದೆ 2002) ಇದರಂತೆ ಶೈಕ್ಷಣಿಕ ಉದ್ದೇಶಕ್ಕಾಗಿ 2 ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಕ್ರಯಕ್ಕೆ ಪಡೆಯಲು/ದಾನವಾಗಿ ಪಡೆಯಲು ಅನುಮತಿ/ವಿನಾಯ್ತಿಯನ್ನು ನೀಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ನೀಡಿರುತ್ತೆ. ಇದರಂತೆ ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II)ಕ್ಕೆ ಅನುಗುಣವಾಗಿರುವುದರಿಂದ ಕೋಲಾರ ತಾಲ್ಲೂಕು ಕಸಬಾ ಹೋಬಳಿ ಪೂವಾಂಡಹಳ್ಳಿ ಗ್ರಾಮದ ಸ.ನಂ. 88ರಲ್ಲಿ 1-33$^{3}/_{4}$ ಎಕರೆ ಮತ್ತು 1-33$^{3}/_{4}$ ಹೀಗೆ ಒಟ್ಟು 3-27 $^{1}/_{2}$ ಎಕರೆ ಜಮೀನುಗಳನ್ನು ಶೈಕ್ಷಣಿಕ ಉದ್ದೇಶಕ್ಕಾಗಿ (Engineering College ಸ್ಥಾಪನೆಗಾಗಿ) ಕ್ರಯಕ್ಕೆ ಪಡೆಯಲು ಅಧ್ಯಕ್ಷರು ಸರ್.ಎಂ. ವಿಶ್ವೇಶ್ವರಯ್ಯ ಎಜುಕೇಶನ್ ಟ್ರಸ್ಟ್ (ರಿ) ಬೆಂಗಳೂರು ರವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(I) (II) ರಂತೆ ಅನುಮತಿಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಕ್ರಯಕ್ಕೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು 2 ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಹಾಗೂ ಈ ಬಗ್ಗೆ ಲಿಖಿತ ಮೂಲಕ ಮಾಹಿತಿಯನ್ನು ಈ ಕಛೇರಿಗೆ ನೀಡತಕ್ಕದ್ದು.
2. ವಿನಾಯಿತಿ: ಅನುಮತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯಿಡ್ ಆಫ್ ಷೇರ್ ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಾಗಿ ಅಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಶೈಕ್ಷಣಿಕ ಸಂಸ್ಥೆಯನ್ನು ಬೆಂಗಳೂರಿನಿಂದ ಕೋಲಾರಕ್ಕೆ ಸ್ಥಳಾಂತರಿಸಲು ಸರ್ಕಾರದಿಂದ ಅನುಮತಿಯನ್ನು ಪಡೆಯತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯ್ದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ. ಓಡಿಪಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಒಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು. ಮತ್ತು ಪ್ರಸ್ತಾಪಿತ ಜಮೀನನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.
7. ಈ ಅನುಮತಿ ಭೂ ಸುಧಾರಣಾ ಕಾಯ್ದೆ 1961ರ ಕಲಂ 109(I) (II) ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆ ಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್.302 ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ.